# ಕಾರಹುಣ್ಣಿವೆ

( ಕವನಸಂಕಲನ )

**ಆನಂದಕಂದ**

ಶರತ್‌ಪ್ರಕಾಶನ ಮಂದಿರ, ಧಾರವಾಡ

ಪ್ರಕಾಶಕರು:
ಶರತ್‌ಕುಮಾರ ದತ್ತಾತ್ರೇಯ ಧರಮಟ್ಟಿ
ಶರತ್‌ಪ್ರಕಾಶನ ಮಂದಿರ
ವಿಜಯಬೀದಿ, ಧಾರವಾಡ

| | |
|---|---|
| ಒಳ್ಳೆಯ ಪ್ರತಿಗೆ: | ೨—೮—೦ |
| ಸಾದಾ ಪ್ರತಿಗೆ : | ೨—೦—೦ |

೧೯೫೧ ನೆಯ ಡಿಸೆಂಬರ್



ಮುದ್ರಕರು:
ಎಸ್. ಎಲ್. ಜೋಶಿ
ಮೋಹನ ಮುದ್ರಣಾಲಯ
ಧಾರವಾಡ

# ಮುನ್ನುಡಿ

ನನ್ನ ಕವನಗಳನ್ನೆಲ್ಲ ಒಟ್ಟುಗೂಡಿಸಿ 'ಕಾರಹುಣ್ಣಿವೆ' ಹೆಸರಿನಿಂದ ಪ್ರಕಟಿಸಬೇಕೆಂದು ಸಂಕಲ್ಪಿಸಿ ಅನೇಕ ದಿನಗಳಾದುವು. ಆದಿನ ನನ್ನ ವಿಚಾರದಂತೆ ಈ ಸಂಕಲನಕ್ಕೆ ಸೇರಿಸಬೇಕೆಂದಿದ್ದ ಕೆಲವು ಕವಿತೆಗಳು 'ಒಡನಾಡಿ' ಯಲ್ಲಿ ಸಂಕಲನಗೊಂಡುವು ಅವಾದ ಮೇಲೆ 'ಕಾರಹುಣ್ಣಿವೆ'ಯನ್ನು ಹಿಂದೆಯೆ ಪ್ರಕಟಿಸಬೇಕೆಂದಿದ್ದರೆ, ಇಂದಿನಷ್ಟು ದೊಡ್ಡ ಸಂಕಲನವು ಆಗುತ್ತಿರಲಿಲ್ಲ.

ಇದರಲ್ಲಿ ೧೯೨೩ರಿಂದ ಇದುವರೆಗೆ ನಾನು ಬರೆದ ಕೆಲವು ಕವನಗಳನ್ನು ಸಂಗ್ರಹಿಸಿದ್ದೇನೆ ಈ ಅವಧಿಯಲ್ಲಿಯ ನನ್ನ ಎಲ್ಲ ಕವನಗಳೂ ಸಂಗ್ರಹ ಗೊಂಡಿವೆಯೆಂದು ಹೇಳಲು ಬರುವಂತಿಲ್ಲ ಇನ್ನೂ ಎಷ್ಟೋ ಉಳಿದಿವೆ ಅವೂ ಒಂದೊಂದು ರೂಪದಿಂದ ಸಂಕಲಿತವಾಗಿ ಬೆಳಕಿಗೆ ಬರಬಹುದು

ಇದರಲ್ಲಿಯ ತೀರ ಕಡಿಮೆ ಕವನಗಳನ್ನುಳಿದು ಮಿಕ್ಕವುಗಳನ್ನೆಲ್ಲ, ಹೊಸ ತಾಗಿ ಪ್ರಚಾರದಲ್ಲಿ ಬಂದಿರುವ ಕಾವ್ಯಗಾಯನ ಪದ್ಧತಿಯಲ್ಲಿ ಹಾಡಿ ತೋರಿಸ ಬಹುದು. ಅನೇಕ ಕವನಗಳಲ್ಲಿಯ ಛಂದಸ್ಸು ಮಾತ್ರಾಗಣದ ಲೆಕ್ಕಕ್ಕಿಂತ ತಾಲಗಣದ ಲೆಕ್ಕವನ್ನು ಅನುಸರಿಸಿದುದೇ ಆಗಿದೆ. ಆದುದರಿಂದಲೇ ಭಾವೋಚಿತ ರಾಗ, ತಾಲಗತಿಗಳಲ್ಲಿ ಇವನ್ನು ಹಾಡಿ ತೋರಿಸಲಿಕ್ಕೆ ಅನುಕೂಲವಾಗುವುದು

ಈ ಸಂಕಲನದಲ್ಲಿಯ ೧ರಿಂದ ೨೩ರ ವರೆಗಿನ ಕವನಗಳು ನನ್ನ ಕಾವ್ಯ ಜೀವನದ ಪೂರ್ವಭಾಗದ ನಿರ್ಮಿತಿಗಳು. ೩೩ರಿಂದ ೫೨ರ ವರೆಗಿನವು ಉತ್ತರ ಭಾಗದ ನಿರ್ಮಿತಿಗಳು. ೨೪ರಿಂದ ೬೨ರ ವರೆಗಿನವು ವ್ಯವಹಾರ ಜೀವನದ ಒಂದೊಂದು ಅನುಭವದ ಅಣಕಗಳು.

ಇದು ಬೆಳಕಿಗೆ ಬರಲು ಇನ್ನೂ ಎಷ್ಟು ಕಾಲ ಹೋಗುತ್ತಿದ್ದಿತೋ! ಆದರೆ ಶರತ್‌ಪ್ರಕಾಶನ ಮಂದಿರದ ಸಂಚಾಲಕರು ಬೇಕಾದ ಅನುಕೂಲತೆ ಗಳನ್ನು ಒದವಿಸಿ, ಬೇಗನೆ ಬೆಳಕಿಗೆ ಬರುವಂತೆ ಮಾಡಿದರು. ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ಕಾಣಿಕೆ ಒಪ್ಪಿಸುತ್ತೇನೆ. ಸಹೃದಯರಿಗೆ ಈ ಸಂಕಲನ ಮೆಚ್ಚಿಗೆಯದಾದರೆ, ನಾನೂ ಪ್ರಕಾಶಕರೂ ಕೃತಾರ್ಥರು.

'ಜಯಂತಿ' ಕಾರ್ಯಾಲಯ
ಧಾರವಾಡ
ತಾ. ೨೫-೧೨-೧೯೫೧

**ಆನಂದಕಂದ**

# ಪ್ರಕಾಶಕರ ಮಾತು

ನಮ್ಮ ಮೊದಲನೆಯ ಗ್ರಂಥ 'ಬೆಳವಡಿಯ ಮಲ್ಲಮ್ಮ' ಹೊರ-ಹೊರಟ ಸ್ವಲ್ಪ ದಿನಗಳಲ್ಲಿಯೇ ನಮ್ಮ ವಾಚಕರಿಗೆ ಈ 'ಕಾರಹುಣ್ಣಿವೆ' ಕವನ ಸಂಕಲನವನ್ನು ಸಲ್ಲಿಸುವ ಸುಸಂದರ್ಭ ಒದಗಿದುದಕ್ಕಾಗಿ ನಮಗೆ ಸಮಾಧಾನ ವೆನಿಸುತ್ತಿದೆ. ಇನ್ನು ಮುಂದೆ ಕೊಡಲಿರುವುದು 'ಆನಂದಕಂದ'ರೇ ಬರೆಯುತ್ತ ಲಿರುವ ಒಂದು ಸಮಸ್ಯಾತ್ಮಕವಾದ ಸಾಮಾಜಿಕ ಕಾದಂಬರಿ. ಅದರ ಹೆಸರು ಕಾದಂಬರಿಯ ಪ್ರಕಟನೆಯೊಂದಿಗೇ ಗೊತ್ತಾಗುವುದು.

'ಆನಂದಕಂದ'ರ ಬಿಡಿಕವನಗಳ ಸಂಕಲನ ಪ್ರಕಟನೆ ಇದುವರೆಗೂ ಆಗಿರ ಲಿಲ್ಲ. ಈಗಲೂ ಅವರ ಎಲ್ಲ ಕವನಗಳನ್ನು ಸಂಕಲಿಸಲಾಗಿದೆಯೆಂದು ಹೇಳಲು ಬರುವಂತಿಲ್ಲ. ಆಯ್ದ ೫೨ ಕವನಗಳು ಮಾತ್ರ ಇದರಲ್ಲಿವೆ ವಿಷಯವೈವಿಧ್ಯದ ಮೂಲಕ, ಎಲ್ಲ ಬಗೆಯ ಜನರಿಗೂ ಇಲ್ಲಿಯ ಕವಿತೆಗಳು ರುಚಿಸಬಹುದಾಗಿ ನಮಗೆ ವಿಶ್ವಾಸ ಇತ್ತೀಚಿಗೆ ಭಾವಗೀತಗಳನ್ನು ಹಾಡುವ ಸಂಗೀತಗಾರರು ನಮ್ಮ ನಾಡಿನಲ್ಲಿಯೂ ಹೆಚ್ಚುತ್ತಲಿದ್ದಾರೆ; ಅಂತಹರಿಗಂತೂ ಈ ಸಂಕಲನ ತುಂಬ ಉಪಯುಕ್ತವಾಗಿದೆ. ಏಕೆಂದರೆ ಸಂಗೀತಕ್ಕೆ ಹೊಂದುವಂತಹ ಸವಿ-ನುಡಿ, ಸುಂದರ ಛಂದೋಗತಿಗಳಿಂದ ಕೂಡಿದ ಕವನಗಳೇ ಇದರಲ್ಲಿ ಹೆಚ್ಚಾಗಿವೆ.

ನಮ್ಮ ಪ್ರಕಾಶನಮಂದಿರದ ಕಾರ್ಯವನ್ನು ಆತ್ಮೀಯ ಭಾವದಿಂದ ಕಾಣುತ್ತಲಿರುವ ಶ್ರೀ ಎಸ್. ಎಲ್. ಜೋಶಿಯವರು, ತಮ್ಮ ಮೋಹನ ಮುದ್ರಣಾಲಯದಲ್ಲಿ ಇದನ್ನು ಅಚ್ಚುಕಟ್ಟಾಗಿಯೂ ಸ್ವಲ್ಪ ಕಾಲದಲ್ಲಿಯೂ ಮುದ್ರಿಸಿಕೊಟ್ಟುದಕ್ಕಾಗಿ ಅವರಿಗೆ ಕೃತಜ್ಞತೆಯ ವಂದನೆಗಳು.

ಕನ್ನಡಿಗರು ಹೆಚ್ಚುಹೆಚ್ಚಾಗಿ ನಮ್ಮ ಪ್ರಕಾಶನಮಂದಿರಕ್ಕೆ ಗ್ರಾಹಕ ಸದಸ್ಯರಾಗಿ ಸಹಕರಿಸಿದಂತೆ, ಹೆಚ್ಚು ಹೆಚ್ಚು ಒಳ್ಳೆಯ ಗ್ರಂಥಗಳನ್ನು ಮಂದಿರವು ಅವರಿಗೆ ಒದಗಿಸುವುದು.

ಧಾರವಾಡ
ತಾ. ೨೫-೧೨-೧೯೫೧

ಶರತ್‌ಕುಮಾರ ಧರಮಟ್ಟಿ

# ಕವನಗಳ ಪರಿವಿಡಿ



★ ★ ★

## 'ಆನಂದಕಂದ'ರ ಬೇರೆ ಗ್ರಂಥಗಳು



ಅಚ್ಚಾದುವು

ಮುದ್ದನ ಮಾತು (ಕವನಸಂಕಲನ)
ಅರುಣೋದಯ ”
ವಿರಹಿಣಿ ”
ಒಡನಾಡಿ ”
ಬಡತನದ ಬಾಳು (ಕಥಾಸಂಕಲನ)
ಸಂಸಾರಚಿತ್ರ ”
ನಮ್ಮ ಬದುಕು ”
ಮಾತನಾಡುವ ಕಲ್ಲು ”
ಸುದರ್ಶನ (ಸಾಮಾಜಿಕ ಕಾದಂಬರಿ)
ರಾಜಯೋಗಿ (ಐತಿಹಾಸಿಕ ಕಾದಂಬರಿ)
ಅಶಾಂತಿಪರ್ವ ”
ಬೆಳವಡಿ ಮಲ್ಲಮ್ಮ (ತರಂಗರೂಪಕ ಸಂಕಲನ)
ಭಾವಗೀತ (ಭಕ್ತಿಗೀತ ಸಂಕಲನ)
ಹಳ್ಳಿಗರ ಹಾಡುಗಳು (ವಿಮರ್ಶಾತ್ಮಕ)
ಕರ್ನಾಟಕ ಜನಜೀವನ (ಸಂಶೋಧನಾತ್ಮಕ)
ಶ್ರೀಬಸವಣ್ಣನವರು (ಮಕ್ಕಳಿಗಾಗಿ ಚರಿತ್ರೆ)

ಅಚ್ಚಿಗೆ ಅಣಿಯಾದುವು

ಸಾಮಾಜಿಕನ ಸಂವಚನ (ವಚನ ಸಂಕಲನ)
ಸಾಹಿತ್ಯವಿಮರ್ಶೆ (ಪ್ರಬಂಧ ಸಂಕಲನ)
ವೀಣಾರವ (ಗೀತ ಸಂಕಲನ)

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥

ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।
ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ॥

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।
ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್
ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಧ್ಯಸ್ಮಜ್ಜುಹುರಾಣಮೇನೋ
ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥

ಓಂ ಶಾಂತಿಃ ಶಾಂತಿಃ ಶಾಂತಿಃ !

ಬಾರ ಕಾರಹುಣ್ಣಿವೆ,
ದೈವದ ಕಾರುಣ್ಯವೆ!

೧

ದೂರದಿಂದ ನಿನ್ನ ವಾರ್ತೆ
ಹಾರಿ ಸಾರಿ ಬರುತಲಿದೆ....
ಹಾರಯಿಸುತ ನಿನ್ನ ಬರವ
ದಾರಿಕಾಯ್ವೆನೆಂದಿನಿಂದೆ;
ಬಾರ ಕಾರಹುಣ್ಣಿವೆ,
ನಮ್ಮೆಲ್ಲರ ಪುಣ್ಯವೆ!

೨

ಬಡವರ ಬರಿಯೊಡಲಿನಂತೆ
ಬರಿದು ಬರಿದು ಬಾನೆಲ್ಲಾ....
ಉಡಿಗೆಯಿರದ ಗರತಿಯಂತೆ
ತೆರಹು ತೆರಹು ಬುವಿಯೆಲ್ಲಾ!
ಬಾರ ಕಾರಹುಣ್ಣಿವೆ,
ವೈಭವ ಸಂಪೂರ್ಣವೆ!

೩

ಸೋಗೆನವಿಲು ವೈಶಾಖದ
ಬೇಗೆಗಳುಕಿ ಮಿಡುಕುತಿವೆ....
ಕೇಗು ಕುಣಿತ ಮರೆದು ನಿನ್ನ
ಆಗಮನಕೆ ದುಡುಕುತಿವೆ;
ಬಾರ ಕಾರಹುಣ್ಣಿವೆ,
ರಸಜನ ಸನ್ಮಾನ್ಯವೆ!

೪

ರವಿ ಬೆಳಗಿದ, ಬಂದಿತೇನು ?
ಶಶಿ ತೊಳಗಿದ ಸಂದಿತೇನು ?
ಹಸಿದಾತನ ಕಣ್ಣು ಕುರುಡು,
ಬೆಳಗು ಬೈಗು ಸಮವೆ ಎರಡು !
ಬಾರ ಕಾರಹುಣ್ಣಿವೆ,
ಕ್ಷುಧಿತ ಜನಶರಣ್ಯವೆ!

೫

ಕರ್ಮೋಪದ ತೆರೆಯು ಬಾನ
ಮಾಡಿ ನಿನ್ನ ಕುಣಿತದಾಣ
ಕೋಲ್ಮಿಂಚಿನ ಕತ್ತಿ ಹಿಡಿದು
ಗುಡುಗಿನ ಅಡಿಗೆಜ್ಜೆ ಜಡಿದು.
ಬಾರ ಕಾರಹುಣ್ಣಿವೆ,
ನಟಸಂಕುಲಗಣ್ಯವೆ !

೬

ಹಳೆಯ ಹುಲ್ಲು-ಗಿಡ-ಮರ ಹೊಸ
ಮಳೆಗೆ ತಳಿರಲಾಶಿಸುತಿವೆ ;
ನೆಲದಿ ಹುದುಗಿದೆನಿತೊ ಬೀಜ
ವೊಳಿತು ಬೆಳೆಯಲೆಳಸುತಿವೆ....
ಬಾರ ಕಾರಹುಣ್ಣಿವೆ,
ಪ್ರಕೃತಿಯ ಚೈತನ್ಯವೆ !

೭

ಎದೆಯರಳುವ ಚೆಲುವ ಸಲಿಸಿ
ಒಡಲ ಹೊರೆವ ಬೆಳಸ ಬೆಳಸಿ
ಗುರಿಯು ಗೆಲುವ ನೆಲೆಯು ತಿಳಿಸಿ
ಧರೆಯೊಳೆ ಸುರಲೋಕ ನೆಲಸಿ
ಬಾರ ಕಾರಹುಣ್ಣಿವೆ,
ನಿನಗಂತಹ ಕಣ್ಣಿವೆ!

೮

ದೇವದಿನವೆ ಸೀನ್ನೈತರೆ
ಜೀವಕುಲದ ಹಸಿವೆಯ ಕೊರೆ-
ಯಾರಿಸಿ ಬಿಡುವಂಥ ಬಸಿರ
ಭೂರಮಣಿಯು ಪಡೆವಳು, ತ್ವರ-
ಬಾರ ಕಾರಹುಣ್ಣಿವೆ,
ಶಾಂತಿಸುಖದರಣ್ಯವೆ!

★ ★ ★

೧

ಸುಮ್ಮಗಿರಬೇಡ ನನ್ನೆದೆಯ ಹಾಡೇ....
ಸುಮ್ಮಗಿರಬೇಡ ನನ್ನೆದೆಯ ಹಾಡೇ!
ಗುಡುಗಿನಬ್ಬರದಿ ಮೊರೆ,
ವೀಣೆ ನುಡಿಸಿಲ್ಲದಿರೆ....
ಸತ್ತವರ ಮನೆಯಂತಿದೇನು ಪಾಡೆ?
ಎತ್ತು ದನಿ, ಇನ್ನೊಂದನೇನು ಬೇಡೆ.

೨

ನೀನು ಗುಡುಗುತಲಿರ್ದ್ದರೆದೆಯ ಹಾಡೇ....
ನೀನು ಗುಡುಗುತಲಿರ್ದ್ದರೆದೆಯ ಹಾಡೇ!
ಮರವೆ-ಮೋಹಗಳ ತೆರೆ
ರೂಢಿಮೂಢತೆಯ ಪೊರೆ-
ಹಿಸಿದು ಲೋಕದ ಕಿವುಡ ಕೇಳಬಹುದೆ....
ಹೊಸಯುಗದ ಹಜ್ಜೆಯುಲಿ ಕೇಳಲಹುದೆ!

೩

ವೀಣೆಯನು ನೀ ನುಡಿಸಲೆದೆಯ ಹಾಡೆ....
ವೀಣೆಯನು ನೀ ನುಡಿಸಲೆದೆಯ ಹಾಡೆ!
ತಾನಾರರಿಯದಿರುವ
ದೀನ ಮಾನವಕುಲವ
ನೀನಿರುವ ಕಡೆಗೆ ಬರಮಾಡಿಕೊಳುವೆ....
ಗಾನದೊಡನೆಯೆ ಬಾಳ ತಿರುಳನೊರೆವೆ!

೪

ಸುಮ್ಮಗಿರಬೇಡ ಬೇಡೆದೆಯ ಹಾಡೇ....
ಸುಮ್ಮಗಿರಬೇಡ ಬೇಡೆದೆಯ ಹಾಡೆ !
ಗುಡುಗಿನಂದದಲಿ ಮೊರೆ
ವೀಣೆ ನುಡಿಸಿಲ್ಲದಿರೆ,
ಸುಮ್ಮಗಿದ್ದರೆ ಜಗಕೆ ಕೇಡು ನೋಡೆ—
ಒಮ್ಮೆಯೊಮ್ಮೆಯು ಸುಮ್ಮಗಿರದೆ ಹಾಡೆ !

★ ★ ★

ಎಲ್ಲೆಲ್ಲಿಯೂ ಮನದ ಮಾತುಗಳೆ ಮುಂಬರಿದು
ಎದೆಯ ಕೊಳಲುಲಿಯನೇ ಕೇಳಗೊಡವು !

ಹಗಲೆಲ್ಲವೂ ಜಿನುಗುತಿಹುದೆ ಮನಸಿನ ವಾಯು,
ತೆಗೆವುದೊಂದೊಂದು ಸಲ ಎದೆಯು ಬಾಯ ;
ಎಣಿಕೆಯಿಲ್ಲದೆ ಬಣಗುನುಡಿಯ ಹೆಣೆವುದು ಮನಸು,
ಎದೆಯದೊಂದೇ ಒಂದು ಪದವೆ ಸವಿಗನಸು !

ಕಾಗೆ-ಗೂಗೆಗಳ ಕೂಗಾಟ-ಕಿರುಚಾಟದಲಿ
ರಾಗಿಸುವ ವೀಣೆಯುಲಿ ಅಡಗಿರುವುದು ;
ನೆರೆದ ಮಂದಿಯ ಬೀದಿಗಲಹದಾ ಕಲಕಲದಿ
ತಾಯ ಜೋಗುಳವಾಡು ಹುದುಗಿರುವುದು.

ಸೂಳೆಯರ ಸಂಗೀತ ಗಟ್ಟಿಗೊಂಡಿಡಿದಿರಲು
ತಿಂಗಳಿನ ಮೌನಗಾನವು ಹೋಯ್ತು ಹೂತು ;
ಡೋಳು-ಹರೆ-ಕೊಂಬುಗಳ ಬಿರುದನಿಯು ಕಿವಿದುಂಬಿ
ಬಾಲಕನ ಲಲ್ಲೆನುಡಿ ಹೋಯ್ತು ಬೀತು !

ಸಿಡಿಲು-ಮಿಂಚುಗಳ ಗುಡುಗಾಟ ಮರೆಮಾಡಿಹುದು.
ಮಡದಿಯಾ ಮೆಲುನುಡಿಯ ಪ್ರಣಯದಾಟ ;
ಮೊರೆದು ಭೋರ್ಗರೆವ ಕಡಲಲಿ ಹುದುಗಿಕೊಂಡಿಹುದು
ನೊರೆವಾಲಿನೊಂದು ಕಿರಿಯೊರತೆಯ ಕಟ !

ಬನದರಳ ಕಂಪ ತೊಂಗಲನು ತಳೆದಿರುವೆಲರು
ಸುಳಿಯುತಿರೆ ಪಾರಿಜಾತಕದ ಮೆಲುಗಂಪು
ನಡುನಡುವೆ ತಲೆದೋರಿ ತಡೆದು ತಣಿವಿತ್ತಂತೆ
ನುಡಿಯು ಒಂದೊಂದು ಸಲ ಕೇಳಿಸುವುದಿಂಪು !

ಕೊಳೆಯು ನೆಲೆವೀಡಾದ ಒಡಲಿನೊಳಗನು ಮರೆದು,
ಚೆಲುವನೇ ಕಣ್ಣುಗಳು ಮೆಚ್ಚುವಂತೆ ...
ಬಲೆಬಲೆಯ ನುಡಿಯುಳಿದು ರಸಿಕ ಕಬ್ಬದ ಜೀವ-
ಕಳೆಯನೇ ಕಂಡುಂಡು ಹೆಚ್ಚುವಂತೆ—

ಮನದ ಮಾತಿನೊಳು ಮರೆಗೊಂಡಿರುವ ಎದೆಯುಲಿಯು
ಅನುದಿನವು ಕೇಳುತಿರುವೊಲು ಕಿವಿಯನು ...
ಅಣಿಗೊಳಿಪೆನೆಂತೆನುತ ನೆನೆವೆನಾವಾಗಲೂ
ಮನದ ಮಾತಿಗೆ ಕೊನೆಯೆ ಇಲ್ಲವೇನು ?

★ ★ ★

ಬಾಡದಿರುವಲರಂತೆ ಬಗೆಯನ್ನು ಮಾಡಿದರೆ
ಬೈಯುವೆನೆ ನಿನ್ನ ತಾಯೇ ?
ಹಾಡುತಿಹ ಕೋಳಲಂತೆ ಕೊರಳನ್ನು ಮಾಡಿದರೆ
ಕುಂದಿಡುವೆನೇನು ತಾಯೇ ?

ಮೂಡುವಾ ನೇಸರಿನ ತೆರ ಮೆಯ್ಯ ಮಾಡಿದರೆ
ಮುಚ್ಚರಿಪರಾರು ತಾಯೇ,
ಕೋಡುಗಲ್ಲಂತೆನ್ನ ಮನವ ನೆಲೆನಿಲಿಸಿದರೆ
ಮುನಿವೆನೇ ಲೋಕಮಾಯೆ ?

ಆದೊಡೇನು ?

ಪೋಡಿ ಕೊರಡಿನ ತೆರದಿ ಬರುಬಗೆಯ ಗೈದಿರಲು
ಬೆಂದು ಬೈಯುವೆನೆ ತಾಯೇ,
ಕಾಡ ಬಿದುರಿನ ಕೊಳವಿಯಂತೆ ಕೊರಳಿರ್ದುದಕೆ
ಕುಂದಿಡುವೆನಿಂದು ತಾಯೆ !

ಮೋಡ ಮುಸುಕಿದ ಪೆರೆಯ ತೆರ ಮೈಯ ನೀಡಿರುವೆ
ಮಚ್ಚರಿಪೆನದಕೆ ತಾಯೆ,
ಕಾಡುವಾ ಕೋಡಿಗನ ತೆರ ಮನವ ಮಾಡಿರುವೆ,
ಮುನಿಸದಕೆ ಪ್ರಕೃತಿಮಾಯೆ !

ಮಾಡಮುದ ಮಾಡಿ ನೀನಾಡುತಾಟಗಳನ್ನು
ಬಿನದಿಸುವೆ ಆಟಗಾತಿ !
ಮಾಡುವುದ ಮಾಡದೆಯೆ ಓಡಾಡಿಸುವೆ ಜೀವ-
ಜಡಗಳನು ಮಾಟಗಾತಿ !

# ಕೊಳಲನುಡಿಸು!

ಕೊಳಲ ನುಡಿಸು ಕಿವಿಯೊಳೆನಗೆ
ಚೆಲುವ ಮೋಹನಾ!

ಕೊಳಲ ನುಡಿಸಿ ಪ್ರೇಮಸುಧೆಯ
ಮಳೆಯ ಸುರಿಸಿ ಹೃದಯ ತಾಪ
ಕಳೆದು ತಿಳಿವಿನೆಳಬಳ್ಳಿಯ
ಬೆಳೆಯಿಸಿ ಬೆಳಗೆನ್ನ ಮನವ....
ಚೆಲುವ ಮೋಹನಾ!

೧

ಎಳೆಯತನದಿ ಹಸುಗಳ ಜಂ-
ಗುಳಿಯ ಕಾಯಲೆಂದು ಬನಕೆ
ಗೆಳೆಯರೊಡನೆ ಹೋಗಿ ಹೊಳೆಯ
ಮಳಲಿನಲ್ಲಿ ನಿಂತು ನುಡಿಸಿ....
ತಿಳಿನೀರನು ಕುಡಿಸಿ ಧೇನು-
ಗಳನು ತಣಿಸಿ ಚೈತನ್ಯದ
ಕಳೆಯ ನಿಲಿಸಿ ಸ್ಥಿರ-ಚರದಲಿ
ಇಳೆಯನು ನಲಿದಾಡಿಸಿರುವ....
ಚೆಲುವ ಮೋಹನಾ!

ಕೊಳಲ ನುಡಿಸು ಕಿವಿಯೊಳೆನಗೆ
ಚೆಲುವ ಮೋಹನಾ!

೨

ಕುಂಜಮುಖದ ಸಖಿಯರ ಮನ
ಮಂಜುಳವಹ ರಾಗದಿಂದ
ರಂಜಿಸುತಾಕೆಯರ ಹೃದಯ
ಪಂಜರಶುಕನಾಗಿ ನೀನು....
ಭಂಜಿಸಿ ಭವಭಯ ಮಾಯೆಯ
ಮಂಜನೆಲ್ಲ ಮರೆಮಾಡಲು
ಸಂಜೆಯ ಸವಿಸಮಯದಲ್ಲಿ
ಕುಂಜವನದಿ ಕುಳಿತೂದಿದ....
ಚೆಲುವ ಮೋಹನಾ!
ಕೊಳಲ ನುಡಿಸು ಕಿವಿಯೊಳೆನಗೆ
ಚೆಲುವ ಮೋಹನಾ!

೩

ಭಿನ್ನವಿಷಯಕೆಳಸದಂತೆ
ಚೆನ್ನ ನಿನ್ನ ಕೊಳಲ ನುಡಿಸಿ
ನನ್ನ ಮನದ ಮೃಗವ ತಣಿಸಿ
ನಿನ್ನೊಳದರ ನೋಟ ನಿಲಿಸಿ....
ತನ್ಮಯವನ್ನಾಗಿ ಮಾಡಿ
ನಿನ್ನ ನೆರೆಯಲಿರಿಸಿಕೊಳ್ಳೊ
ಬಿನ್ನಹವೆನ್ನದು ಮನ್ನಿಸಿ
ಚಿನ್ಮಯ ಶ್ರೀಕೃಷ್ಣಮೂರ್ತಿ....
ಚೆಲುವ ಮೋಹನಾ!
ಕೊಳಲ ನುಡಿಸು ಕಿವಿಯೊಳೆನಗೆ
ಚೆಲುವ ಮೋಹನಾ!

ಏನು ಇದು ಸಾರಥಿಯೆ, ನೀನಿಂತು ಮಾಡಿದರೆ
ನಾನು ಹಗೆಯರಸರನು ಕೂಸಿಸುವೆನೆಂತು ?

೧

ದಾರಿ ಯಾವುದು ಈಗ ತೇರ ನಡೆಯಿಸುತಿಹುದು ?
ವೈರಿಗಳು ಪಾಳೆಯವ ಊರಿರುವುದೆಲ್ಲಿಯೊ !
ದಾರಿಯನು ಅರಿತವರು ಸಾರಿರುವ ಕುರುಹುಗಳು
ತೋರಲೊಲ್ಲವು ಕಣ್ಗೆ. ಗಾರುಗೊಂಡಿದೆ ಮನವು-
ಏನು ಇದು ಸಾರಥಿಯೆ ?

೨

ಕಾಲಾಳುಗಳು ಹೋದ ಕಾಲುಗಳ ಹೊಳಹಿಲ್ಲ;
ಮೇಲಾಳುಗಳ ತೇರ ಗಾಲಿಗಳ ಗುರುತಿಲ್ಲ.
ಕೀಲಿಸಿರುವುದು ದಾರಿ ಮುಳ್ಳು-ಕಲ್ಲುಗಳಿಂದೆ
ಕಾಲಿಡಲು ಬಾರದಿದೆ ಹಳ್ಳ-ಹಿಗ್ಗುಗಳಿಂದೆ.
ಏನು ಇದು ಸಾರಥಿಯೆ ?

೩

ಕೊಳುಗುಳದ ದಾರಿಯನು ತಿಳಿದಿರುವನಿವನೊಡನೆ
ತೆಳರೆಂದು ತಿಳಿದವರು ತಿಳುಹಿದರೆ ನಾ ಬಂದೆ;
ತೊಳಲಿಸುತಲಿಹೆ ನೀನು, ಉಳಿದು ಸರಿದಾರಿಯನು !
ಗಳಿಲನೇ ರಣಕೆ ನಡೆ, ನಗೆಯಾಗ ಒಳಿತೇನು ?
ಏನು ಇದು ಸಾರಥಿಯೆ ?

೪

ಹಲವು ಬಂಟರ ತೇರುಗಳ ನಡೆಸಿ ಮುನ್ನ ನೀ
ಗೆಲವುಗಳನೆನಿತೆಸಿತೊ ಗಳಿಸಿಕೊಟ್ಟಹೆಯೆಂತೆ—
ಚೆಲುವ ನೀನಿಂದೇತಕೊಲಿಯದಿಹೆಯ್ಯ ನನಗೆ ?
ಗೆಲವನಾ ಗಳಿಸುವುದು ಮನಕೆ ಬಾರದೆ ನಿನಗೆ ?
ಏನು ಇದು ಸಾರಥಿಯೆ ?

೫

ಸಾರಥಿಯು ಸಮನಿರಲು ಆರಾತಿಗಳನರಿದು
ವೀರನವ ಗೆಲವನ್ನು ಸಾರುವುದು ಸಹಜವ್ಯ !
ಹಾರಿ ಬೇಲಿಯೆ ಹೊಲದ ಸೇರಿ ಮೇಯುವ ತೆರದಿ
ಸಾರಥಿಯೆ ಕೈಮಾರೆ ಹೋರಿ ಗೆಲ್ಲಲು ದಾರಿ ?
ಏನು ಇದು ಸಾರಥಿಯೆ ?

★ ★ ★

ನಿನ್ನನರಿಯುವ ಅರಿವ ಚೆನ್ನ ನನಗೀಯುವುದು,
ನನ್ನ ಈ ಬಯಕೆಯನು ಹಣ್ಣಿಸೈ ನೀನೊಲಿದು!

೧

ಹೆರರು ತನ್ನವರೆಂಬ ಅರಿಕೆ ನಸುವಿಲ್ಲದೆಯೆ
ನೆರೆದಿರುವ ಗರತಿಯರ ನೆರವಿಯನು ಕಡೆಗಣಿಸಿ,
ತೊರೆದ ಮೊಲೆವಾಲುಣಿಸಿ ಹೊರೆಯುವಾ ತಾಯನ್ನು
ಮರೆಯದೇ ಗುರುತಿಸುವ ಕಿರಿಯ ತರಳನ ತೆರದಿ-
ನಿನ್ನನರಿಯುವ ಅರಿವ
ಚೆನ್ನ ನನಗೀಯುವುದು!

೨

ಚೆಲು-ಚೆಲುವ ಅಲರುಗಳು ಇಳೆಯೊಳಗೆ ಬಹಳಿರಲು
ಅಲರುಣಿಯು ಹುರುಳಿರದ ಅಲರುಗಳನುಳಿದುಳಿದು
ಉಲಿದಾಡಿ ಹಾರಾಡಿ ನಲಿಯುತಿರುವಾಗಲೇ
ಬಲುಬಂಡ ತಳೆದಿರುವ ಅಲರುಗಳ ತಿಳಿವಂತೆ-
ನರಿಯುವ ಅರಿವ
ಚೆನ್ನ ನನಗೀಯುವುದು!

೩

ಸಾಕಿದವನೆನ್ನದೇ ನೂಕುತಿರಿಯುವ ತುಂಟ
ಆಕಳೊಲು ನನ್ನ ಬಗೆ ಕಾಕುತನವನು ತಳೆದು,
ಬೇಕುಬೇಕಾದಂತೆ ಅಲೆಯುತಿದೆ ಅದನಿಂದು
ಜೋಕೆಯಲಿ ಒಂದೆಡೆಗೆ ಬಿಗಿಯಲಿಕೆ ಬರುವಂತೆ
ನಿನ್ನನರಿಯುವ ಅರಿವ
ಚೆನ್ನ, ನನಗೀಯುವುದು!

೪

ಕಂಪ ಕಾಣುವ ಮೂಗನಿಂಪನರಿಯುವ ಕಿವಿಯು,
ಸೊಂಪ ನೋಡುವ ಕಣ್ಣು, ತಂಪ ತಿಳಿಯುವ ತೊವಲ,
ಕೊಂಪೆಯೊಳು ಹಾಕು ಇವು ಬೇಡಬೇಡವೊ ಸಾಕು,
ಪೆಂಪಿಗನೆ ನಾನಿನ್ನ ತಿಳಿಯುವುದದೇ ಬೇಕು !
ನಿನ್ನನರಿಯುವ ಅರಿವ
ಚೆನ್ನ ನನಗೀಯುವುದು !

* * *

# ಲ * * * * ಮೊರೆ

೧

ಬರು ನನ್ನ ಬಳಿಗೆ ಜೀಯಾ,
ಮೊರೆಯ ಕೇಳಿ
ಸುರಿಸು ನಲ್ಮೆಯ ಸುಧೆಯ !
ಸುರತರುವಿನಂದದಲಿ ಸುಜನರ
ಹಿರಿಯ ಕೊರತೆಗಳೆಲ್ಲ ಕಳೆಯುತ
ಪೊರೆವವರು ನೀನಲ್ಲದಲೆ ಯಾ-
ರಿರರು ಎಂದರಿತಿರುವೆ ರೇಯಾ !
ಬರು ನನ್ನ ಬಳಿಗೆ ಜೀಯಾ !

೨

ತಾಯಾವು ತೊಲಗಿರಲು-
ಕರುವು ಬಲು
ಬಾಯನು ಬಿಡುತಿರಲು,
ಮೇಯಲಡವಿಗೆ ಹೋದ ಹಸುವಿಗೆ
ಆಯೆಳೆಯ ಕರುವೊರಲುತಿಹ ನಸು
ಬಾಯಿ ಕೇಳಲು ಓಡಿ ಬರುತಲಿ
ನೇಯದೊಳು ಮೊಲೆಯುಣಿಸುವಂದದಿ
ಬರು ನನ್ನ ಬಳಿಗೆ ಜೀಯಾ !

೩

ಎಳೆಯನು ಬಿಸಿಲಿನಲಿ–
ತೊಳಲುತಿರೆ,
ಬಳಲಿ ಬಿದ್ದಡವಿಯಲಿ....

ತಳಮಳಿಸುವುದು ತಿಳಿಯೆ ತಾಯಿಯು
ಕಳವಳಿಸಿ ಕೈಗೆಲಸವುಳಿಯುತ-
ಗಳಿಲನೇಳುತ ತೆರಳಿ ಅಲ್ಲಿಗೆ
ಎಳೆಯನನು ಸಂತಯಿಸುವಂದದಿ
ಬರು ನನ್ನ ಬಳಿಗೆ ಜೀಯಾ !

೪

ದೂರದೂರಿಗೆ ಹೋಗಿಹ
ತೋಟಿಗನು ತಾ
ಸೇರಿ ಮರಳಿ ತೋಟವ—
ನೀರ ಕಾಣದೆ ಕೊರಗಿ ಬಾಡಿದ
ಮೋರೆಯಿಂದಿಹ ಎಳೆಯ ಬಾಳೆಯು
ತೋರಲೆದುರಿಗೆ ಮರುಗಿ ಬೇಗನೆ
ನೀರನುಣ್ಣಿಸಿ ಪೊರೆಯುವಂದದಿ
ಬರು ನನ್ನ ಬಳಿಗೆ ಜೀಯಾ !

★ ★ ★

ಮಳೆಗಾಲದ ನೀರಹೊಳೆಯನ್ನು ದಾಂಟಿಸಲು ಅಂಬಿಗರಣ್ಣ ಅರಿತವನಾದರೆ, ಅಳಿಗಾಲದ ಬಾಳಹೊಳೆಯನ್ನು ದಾಂಟಿಸಲು ಬಲ್ಲವರಾರು ?

ನಡುಹೊಳೆಯ ಮಡುವಿನೊಳು ತೊಡಕಿ ಮಿಡುಕುತಲಿಹೆನು,
ತಡೆಯದಲೆ ತೋರು ನೀ ತಡಿಯ ತಲುಪುವ ಹದನು !

೧

‘ ನನ್ನ ನುಡಿ ಮನ್ನಿಸದೆ ಬೀಳದಿರು ! ಈ ಹೊಳೆ—
ಯುನ್ನ ಬಲ್ಲಿದರ ಹಲವರ ಬಳಲಿಸಿಹುದೋ ! ’
ಎನ್ನುತೆಚ್ಚರಿಸಿರುವ ನಿನ್ನ ನುಡಿ ಹೀಗಳೆದು
ನನ್ನ ಬಲುಹಿನ ಗರುವದಲಿ ಹೊಳೆಗೆ ಹಾರಿಹೆನು !

೨

‘ ನಸುವೇಳೆ ತಾಳು, ನಾ ಹೇಳುವುದ ನೀ ಕೇಳು !
ಗಸಣೆಗೊಳಿಸದೆ ಹೊಳೆಯ ದಾಂಟಿಸುವೆ ’ ಎಂದೆಯ್ಕೆ !
ಕಸಕೆ ಸರಿಯೆಣಿಸಿದೆನು ನಿನ್ನ ನಲ್ನುಡಿಗಳನು,
ಮುಸಣದೀ ದಾರಿಯೊಳು ಅಡಿಗಳನು ಚೆಲ್ಲಿಹೆನು.

೩

‘ ಬೀಳದಿರು, ಬೀಳದಿರು ! ಹಿಂದಿರುಗು, ಸರಿ, ಮರಳು !
ಕೇಳೆನ್ನ ವಚನ ಬಾಳುವೆ ಬಹಳ ದಿವಸಗಳು !’
ಹೇಳಿದೆಯೊ ಇಂತು ನಡುಹೊಳೆಯ ಸೇರುವ ವರೆಗು-
ಮೂಳ ನಿಜ ನಾನು, ಗಣಿಸದೆ ಹೊಳೆಯ ಹೊಕ್ಕಿಹೆನು !

೪

ನನ್ನ ತೋಳುಗಳ ತಿರುಳನ್ನು ತೊರೆಯನ್ನೀಸಿ
ನಿನ್ನೆದುರು ತೋರಿಸುತ ಮೂದಲಿಪೆನೆಂದಿದ್ದೆ ;
ಮುನ್ನೋಡಿ ತಿಳಿಯದೇ ಬನ್ನದಲಿ ಬಿದ್ದಿಹೆನು,
ಮನ್ನಿಸೆನ್ನನು ಮೊರೆಯ ಅಣ್ಣ ನಾವಿಕ, ಪೊರೆಯೊ !

೫

ಬಡಿದಾಡಿ ನೀರಿನೊಳು ಬಳಲಿಹವು ಕೈಕಾಲು;
ಅಡಿಗಡಿಗೆ ಮೂಗು-ಕಣ್-ಕಿವಿಗಳಿಗೆ ನೀರೇರಿ.
ಕುಡಿಯುತ್ತಲಿಹೆ ಒಡಲು ಒಡೆಯುವೊಲು ಕದಡನ್ನು
ನಡುಹೊಳೆಗೆ ಬರಲೀಗ, ದಡದಡಿಸುತಿಹೆನು !

೬

ಕ್ರೂರಜಲಜಂತುಗಳು ನೀರಸುಳಿ ತೆರೆತೆರೆಯು
ತೋರೆ ಭೀತಿಯೊಳು ಗುಡುಗಾಡುತಿದೆ ನನ್ನೆದೆಯು !
ಧೀರ, ನಿನ್ನಯ ನುಡಿಯ ಮೀರಿ ನಾ ನಡೆದುದನು
ತಾರದೆಯೆ ಮನದಲ್ಲಿ ತಾಪಿಸುವುದೆನ್ನನು !

೭

ಮೂರ್ಖನೊಬ್ಬನು ಹಿರಿಯರಾಡಿದುದನೆಣಿಸದೇ
ಖೇಡನಂದದಿ ನಡೆದು ಕೇಡಿಗೊಳಗಾಗಿರಲು,
ಖೋಡಿಗಳಿದನ ನಮ್ಮ ನುಡಿಯನೆಂದಾತನನು
ನೋಡಿಯೂ ನೋಡದಾ ತೆರ ಸುಮ್ಮಗಿರುವರೆ ?

೮

ಹಲವು ಸಲ ದಾಂಟಿಹೆಯೊ, ಹೊಳೆಯಾಳ ತಿಳಿದಿಹೆಯೊ,
ಸುಲಭದಲಿ ಹಲವು ಜನರನು ಪಾರು ಮಾಡಿಹೆಯೊ !
ತಲುಪಿಸೈ ತಡಿಗೆನ್ನ ಚೆಲುವ ಅಂಬಿಗರಣ್ಣಾ,
ಬಲುಮೆಯಿಂದಲಿ ನನ್ನ ಬಳಗದೊಳು ಕೂಡಿಸೈ !

★ ★ ★

ಏನು ಮುನ್ನಿನ ಜನ್ಮದಲಿ ಪುಣ್ಯಗೈದಿರುವೆ
ಇಂಚರದ ಕೊಳಲೆ ನೀನು ?
ಗಾನಲೋಲನ ಕೈಯ ಸೇರಿ ಕುಣಿದಾಡಿಸಿದೆ
ಕಸುಲೋಪ್ಪವಾಂಪವನ್ನು !
ಆರೋಹಣ ಸ್ವರದಿ ಸುಪ್ತಿಯಲ್ಲಿಹ ಜಗವ
ಜಾಗೃತಿಯನೊಂದಿಸಿದೆಯೊ !
ಅವರೋಹಣ ಸ್ವರದಿ ಎಚ್ಚತ್ತ ಜಗದ ಬಗೆ-
ಯನ್ನು ನಿನ್ನೆಡೆಗೆಳೆದೆಯೊ !

ನಂದನಂದನನ ಸನ್ನಿಯ ಹಾಡನೊಡಗೊಂಡ
ಚೆಂದವಹ ನಿನ್ನ ದನಿಯು—
ಕಂದರನು ಒಳುದಾರಿಯಲ್ಲಿ ನಡೆಯಿಸುವ ಹೆ-
ತ್ತಮ್ಮನಿನಿದಾದ ನುಡಿಯು !

ಗೋಪಾಲಬಾಲಕರು ತಾಪಕೊಳಗಾಗದೊಲು
ಶ್ರೀಕೃಷ್ಣನೇನು ಗೈದ ?
ನೀ ಪೇಳು, ನಿನ್ನ ಮಧುರವದಿಂದಲವನಾವ
ಮೋಹಮಂತ್ರವನೂದಿದ ?

ನಲ್ಲೆಯರ ಮುಂದೆ ಗೋವಿಂದನಾಜ್ಞೆಯಲಿ ನೀ-
ನಾವ ಪದ ಪೇಳ್ದೆ ? ಎಂತು ?
ಗೊಲ್ಲಹೆಂಗಳೆಯರಿಗೆ ಸಂಸಾರದನುಭವವು
ಬೆಲ್ಲದಂತಾದುದೆಂತು ?

ಸತ್ಯಕ್ಕೆ ಸಹಕಾರಿ ಮಿಥ್ಯಕ್ಕೆ ಕಡುವೈರಿ
ಸಜ್ಜನರ ದುಃಖಹಾರಿ—
ಮತ್ತೆ ನಿನ್ನಾ ಗಾನವಾಗಿದ್ದಿತ್ತೈ, ಕುಜನ-
ವಂಶಕ್ಕೆ ಹಿರಿಯ ಮಾರಿ !

——— ಹತ್ತೊಂಬತ್ತು ———

ಸಂತಸದ ಸಿರಿಮನೆಯು ಸಂತೃಪ್ತಿಯುರಮನೆಯು
ಜ್ಞಾನಪೀಯೂಷಝರಿಯು,
ಶಾಂತಿಯಾಗರವು ನಿಶ್ಚಿಂತೆಯಾ ತವರೂರು
ನಿನ್ನ ಮಂಜುಲಲಹರಿಯು !

ನಿನ್ನ ಸ್ವರ ಕೇಳದಿರೆ ಚೆನ್ನಕಿಟ್ಟನ ಮರೆತು
ಬನ್ನಗೊಂಡಿಹುದು ಬುವಿಯು;
ಧನ್ಯ ವೇಣುವೆ, ನಮಗೆ ಕೇಳದಿಹುದೇಕೀಗ
ನಿನ್ನ ಮಾಧುರ ಮುರಲಿಯು ?

ದ್ವಾಪರದಿ ನುಡಿಸಿದಾ ಗೋಪಾಲ ನಿನ್ನನ್ನ-
ದೇಕೀಗ ನುಡಿಸದಿಹನು ?
ತಾಪ ಕೂಪದೊಳುರುಳಿರುವ ಜಗದ ಜನರನ್ನು
ತಣಿಸದೇತಕೆ ತಡೆದನು ?

ಇದೇ ಭಾವಸಮಾಧಿಯೊಳಿರುವಂದು, ಒಳಗಿನಿಂದುಲೊಂದು ಕೊಳಲಾಲಿಯು ಇನಿದನಿ ನುಡಿದು ಎದೆಯುನರಳಿಸಿತು :

ನುಡಿಸದೇಕಿಹ ? ದೇವ ಜಗದಾದಿಯಿಂದೆ ಎಡೆ-
ಬಿಡದೆ ನುಡಿಸುತಲಿರುವನು ;
ನುಡಿಸುವನು ಜಗವು ಮುಗಿವಾ ವರೆಗೆ ಮುಂದೆಯೂ
ಎಂದಿನಂದದಲಾತನು.

ಭೋಗಮಲದಲಿ ಮುಚ್ಚಿ ಹೋಗಿರುವ ನಿನ್ನ ಕಿವಿ-
ಗಳಿಗೆ ಕೇಳಿಸದಿರುವುದೋ !
ತ್ಯಾಗದಿಂದಾ ಮಲವ ನೀಗಿದರೆ ನಿನಗೆ ನಿಜ-
ವಾಗಿಯಾ ದನಿ ಕೇಳ್ವುದೋ !



ಎಂತು ನೀನಿಹೆಯೋ—ಪರಾತ್ಪರ
ಎಲ್ಲಿರುತಿಹೆಯೋ ?

ಎಂತು ನೀನಿಹೆಯೋ ನೀನೆಲ್ಲಿರುತಿಹೆ ನಿನ್ನ
ಅಂತವ ತಿಳುಹಿ ನಿಶ್ಚಿಂತನ ಮಾಡೆನ್ನ !

೧

ಅಣುರೇಣು-ತೃಣ-ತೃಟಿಯೊಳು ವ್ಯಾಪಿಸಿದ ನಿನ್ನ
ಘನತರ ರೂಪವನರಿತುಕೊಳ್ಳದೆಯೆ....
ಮನಕೆ ಬಂದಂತೆ ಚಿತ್ರಿಸಿ ಪೂಜಿಸುತ ನಿನ್ನ
ಅನುದಿನ ನಿರ್ನೆರ ದಣಿಯುತ್ತಲಿಹೆನೊ !

೨

ಕ್ಷೀರೋದನಿಧಿಯಲ್ಲಿ ವೈಕುಂಠಪುರದಲ್ಲಿ
ದೂರ ಕೈಲಾಸ-ಸ್ವರ್ಗದೊಳಿಹೆ ನೀನೆಂದು–
ಗಾರುಗೊಂಡಿಹೆನೋ ನಿನ್ನಯ ತಾಣ ತಿಳಿಯದೆ,
ಸಾರಿ ಹೇಳುವ ನಿನ್ನ ನುಡಿಯನ್ನು ನಂಬದೆ !

೩

ಕಲ್ಲು-ಕಂಚಿನ ಗೊಂಬೆಯಲ್ಲಿ ನಿಲ್ಲದಲೀಗ
ಫುಲ್ಲಹೃದಯದ ಯೋಗಿಗಳ ಮನದಿ ನಿಂದು,
ಬಲ್ಲಿದನೆ ನಿನ್ನಯಾ ವೈಯನು ಮನೆಯನು
ಬಲ್ಲವನು ನಾನಾಗುವೊಲು ಬೋಧಿಸೆನಗೆ !

* * *

ಎಂತು ನೀನಿಹೆಯೋ—ಪರಾತ್ಪರ,
ಎಲ್ಲಿರುತಿಹೆಯೋ ?

★ ★ ★

( ಒಂದು ಸಾಂಪ್ರದಾಯಿಕ ಭಾವನೆಯ ಉತ್ಪ್ರೇಕ್ಷೆ )

೧

ರಾತ್ರಿಸತೀಪತಿ ಚಂದಿರನು,—ಕತ್ತಲೆಯೆಂಬಾ ಕುಲಟೆಯಲಿ
ಇರುಳೆಲ್ಲವು ರತನಾಗಿರುತ—ಪರಿಪರಿಯ ಸರಸವಾಡುತಲಿ
ಜಗಕಿಂದು ಮೊಗವ ತೋರಿಸಲು—ಬಗೆಯೊಳು ನಾಚಿಕೆಯೊಂದುತಲಿ,
'ಮಲಗಿದ ಜನರೇಳುವ ಮೊದಲು
ಮರೆಯಾಗುವೆ' ನೆಂದು ಜವದೊಳು
ಪಡುವಲ ಸೀಮೆಯ ಬೆಟ್ಟದೊಳು
ಅಡಗಿದನೆಲ್ಲಿಯೊ ತೋಹಿನಲಿ—ಒಡನಿರುವ ಕತ್ತಲೆಯನಗಲಿ!

೨

ಚಿತ್ತವನು ಸೆಳೆದ ಚಂದಿರನು—ಎತ್ತಲೊ ಹೋಗಿರುವುದ ಕಂಡು
ಮತ್ತಾರನಾಶ್ರಯಿಪೆನೆಂದು ಅತ್ಯಂತ ಕಾತರವನುಂಡು,
ಎತ್ತಲೂ ಸುತ್ತುತಿರಲಂದು – ಹೊತ್ತಿನ ಬರವನು ಬಗೆಗೊಂಡು,
ಅವನೊಡನೆ ಬೆರೆಯಬೇಕೆಂದು
ತವಕದಿಂದ ಕತ್ತಲೆ ಬಂದು
ದಿವಸದೆರೆಯನೆಡೆ ನಿಲಲಂದು
ಕಣ್ದೆರೆದ ಕನಲಿ ಸುಚರಿತನು—ಕೆಂಪಡರಿ ಕಂಡನಾಕೆಯನು.

೩

ಭಾಸ್ಕರನ ಕೋಪವನ್ನರಿದು—ತಸ್ಕರರ ಕೆಳದಿ ಬೆದರಿದಳು.
ಮಿತ್ರನ ಮೊಗ ನೋಡಲು ಹೆದರಿ – ಸುತ್ತುತ ಗಿಡ-ಮರ-ಮೆಳೆಗಳೊಳು
ಮೈಗರೆದಳೊಂದು ತೋಹಿನೊಳು—ಹುಲಿ-ಸಿಂಗಗಳಿಹ ಕಾಡಿನೊಳು
ಕತ್ತಲೆಯ ದುಃಸ್ಥಿತಿಯನರಿದು,
ಆಕೆಯ ಅವಿವೇಕವ ನೆನೆದು,
ಕಾಡಿನರಳುಗಳು ಬಾಯ್ದೆರೆದು,
ಹಿರಿನಗೆಯನಂದು ಹೊಂದಿದುವು—ಸುರಭಿಯನೆಲ್ಲೆಡೆ ಹರಡಿದುವು.

—— ಇಪ್ಪತ್ತೆರಡು ——

೪

ನಿಜ ಸ್ನೇಹದಿನಿಯ ನೇಸರಿನಾ—ಪಾವನತೆಯನ್ನು ತಾ ನೋಡಿ,
ಕಮಲಿನೀ ರಮಣಿ ಪ್ರೇಮದಲಿ—ಮೆಲುನಗೆಮೊಗ ಮೇಲಕೆ ಮಾಡಿ,
ಪತಿಯನ್ನು ಕೃತಜ್ಞತೆಯಿಂದೆ—ನಿರುಕಿಸುತ ನಲಿವೊಳೀಜಾಡಿ,
'ಪರಸತಿಯನಪೇಕ್ಷಿಸದವನು
ನಿಜಸತಿಯ ನಿಚ್ಚದೊಲುಮೆಯನು
ದೊರೆಕಿಸಿ ಚಿರಸುಖವೊಂದುವನು!'
ಎಂದಿಹ ನನ್ನಿಯ ನುಡಿಗಳನು—ಸಾರಿದಳು ಧಾರಿಣಿಗೆ ತಾನು!

೫

ವಲ್ಲಭನಿಲ್ಲದ ವೇಳೆಯಲಿ—ತನ್ನೆಡೆ ಬಂದಾರಡಿಗಳನು
ಹದಿಬದೆಯ ಹುರುಳಿನಲಿ ಬಿಗಿದು ಬಂಧಿಸಿರಲು ಕಮಲಿನಿಯದನು
ಕಾಣುತ, ಕರುಣದಿ ಭಾಸ್ಕರನು—ಕಮಲಿನಿಗೆ ಇಂತು ಉಸುರಿದನು:
'ಬಂಧಿಸಿದಾ ಮಧುವಾಳಿಯನು
ಬಿಡು ಬಿಡು ಕೊಡು, ಗಡ ಮೋಕ್ಷವನು
ತಾಳಿಹವು ತಕ್ಕ ಶಿಕ್ಷೆಯನು ...
ಸಾರ್ಥಕಗೊಳಿಸಲು ಬೇಕದನು—ಸುಮನೆಯೆಂಬ ತವನಾಮವನು;

೬

ನಲ್ಲನ ಇನಿನುಡಿಯ ಕೇಳಿಸುತ—ಪುಲ್ಲಾನನೆ ಮರುನುಡಿ ಕೊಡದೆ,
ಹೃದಯದಿ ಕರುಣದ ರಸ ಸುರಿಯೆ-ಮಧುವಾಳಿಯ ನಸು ನೋಯಿಸದೆ,
ಬಿಸುಗಡೆ ಕೊಡಲಾ ಬವರಗಳು—ತಮ್ಮಯ ಗುಂಜಾರವದಿಂದೆ—
ವನಜಾಪತಿಯುಪಕಾರವನು
ನೆನೆ-ನೆನೆದು ಹೊಂದಿ ಹರುಷವನು
ತೋರಿಸಲು ತಮ್ಮ ಹೃದಯವನು
ಇಂಚರದಲಿ ಕೊಂಡಾಡಿದುವು ಮಿತ್ರನ ಮಹಿಮೆಯ ಹಾಡಿದುವು.

——— ಇಪ್ಪತಮೂರು ———

೭

ತನ್ನಯ ಕಟ್ಟಳೆ ಮೀರದೆಯೆ—ಬಂಡುಣಿಗಳನ್ನು ಬಿಡಲೆಂದು
ಮೊಗದಲ್ಲಿ ಮೋದವನು ತಳೆದು—'ಭಲೆಭಲೆ ಶರಜನಿಸತಿ' ಎಂದು
'ಇರುಳೆಲ್ಲ ನಿನ್ನ ಸಾನಗಲಿ—ಮರುಗಿಸಿ ಕುದಿದೆನು ಮನನೊಂದು'
ಎಂದೀತೆರ ನಯನುಡಿಯಾಡಿ,
ಪ್ರೇಮಾಮೃತವನು ತಾನೂಡಿ,
ತನ್ನಯ ಕೈ ಮುಂದಕೆ ಮಾಡಿ
ಬಿಗಿದಪ್ಪಿದ ಬಾನ್ಮಣಿಯವನು—ತಾವರೆವೆಣ್ಣನು ತಣಿಸಿದನು.

೮

'ನಿನ್ನೊಲುಮೆಗೆ ಸಲುವ ಫಲವನು—ಚೆಲುವೆಯೆ ನಿನಗೀಯದೆ ಬಿಡೆನು;
'ಸತಿಯರಿಗಹಿತವು ನಿಜಪತಿಯು—ಬಯಸುವುದು ಪರಾಂಗನೆಯನ್ನು
'ಅದರಿಂದೆ ಅನ್ಯರೆನ್ನನ್ನು—ನಿಟ್ಟಿಸಲು ಅವರ ಕಂಗಳನು....'
'ಸೀದು ಮಾಳ್ಪೆ ಕಣ್ಣಲಿಗಳನು,
'ಪಾವಿತ್ರ್ಯದ ಬೆಲೆ ತೋರುವೆನು!'
ಇಂತೊರೆದು ಸರಸಿಜಾತೆಯನು....
ಸಂತಸದಲಿ ಬಾಯ್ದೆರೆಸಿದನು—ತಾನುಗ್ರತೆಯನು ವಹಿಸಿದನು.

★ ★ ★

( ಜೀವನದಲ್ಲಿಯ ಒಂದು ಅನುಭವದ ಅನ್ಯೋಕ್ತಿಯಿದು. )

೧

‘ ಇರುಳೆಲ್ಲವೂ ತಿರುಗಿ ತಿರೆಗೆ ಚೆಲುವನು ಬೀರಿ,
ನರರ ಕಣ್ಮನ ತಣಿವ ತೆರದಿ ಒಲವನು ತೂರಿ,
ಚರಿತಾರ್ಥನಾಗಲಿಕೆ ಸರಿಯಿದೇದಿನ ’ ಎಂದು,
ಹುಣ್ಣಿಮೆಯ ತಣ್ಗದಿರ ತುಂಬುಮೊಗದಲಿ ಬಂದು,
ಅಳತೆಯಿಲ್ಲದ ಪಳುಕು-
ಸೆಳೆಯಂತಿರುವ ತನ್ನ
ಹೊಳೆವ ಕೈ ಕೆಳಗಿಳುಹಿ,
ಹೊನ್ನಹುಡಿಯನ್ನು ಹಸನೆಣ್ಣೆಯಲಿ ಹೊರೆದು,
ಬಣ್ಣಬರೆದನು ಇಳೆಗೆ ಕಲೆಯ ನೆಲೆಯರಿದು.

೨

ಬೆಳಕಿನೊಂದಿಗೆ ರವಿಯು ಬಿರುಬಿಸಿಲು ಪಸರಿಸಿರೆ
ಝಳತಾಗಿ ಜೀವಕುಲ ತಳಮಳಿಸುತಿರಲು, ಪೆರೆ
ಬೆಳಕಿನೊಡವೆರಸಿ ತನ್ನೊಡಲಿನಮೃತವ ಸುರಿಸಿ,
ಎಳನಗೆಯ ಮಲ್ಲಿಗೆಯ ಅರಳುಗಳ ಮಳೆಗರಿಸಿ,
ನೆಲಕೆ ತಂಪನು ನೀಡಿ,
ಜೀವಿಗಳ ಮೈ ತೀಡಿ,
ಸುಖ-ಶಾಂತಿಗಳನೂಡಿ,
ಜಗವನೆಲ್ಲವ ನಗಿಸಿ ಸೊಗಸನೊಂದಿರುವ—
ನಗುನಗುತ ಬಾನ ತೊರೆಯೊಳು ತೇಲುತಿರುವ.

* * * *

೩

ಏನಿದೇನಿದು ಚಿತ್ರ ? ಬಾನೊಳಾಡುವ ಪೆರೆಯು
ಹೀನಕಳೆಯುವನಾಗುತಿಹನೇಕೆ ? ಅಚ್ಚರಿಯು !
ನೋಡು-ನೋಡುವುದರೊಳೆ ಎನಿತು ಇದು ಮಾರ್ಪಾಡು ?
ಮೋಡ ನಸುವೂ ಇಲ್ಲ, ಆದರೆಯು ಈ ಪಾಡು !
ಚೆಲುವು ಜಾರುತ್ತಲಿದೆ,
ಹೊಳಪು ಹಾರುತ್ತಲಿದೆ,
ಕೊಳೆಯು ಹೇರುತ್ತಲಿದೆ—
ಬಾಡಿರುವ ಹೊನ್ನರಳ ತೆರ ತೋರುತಿಹನು—
ನೋಡುಗರ ಕಣ್-ಮನದ ತಣಿವ ಕಳೆದಿಹನು.

೪

ಅರಿವು ಮಿರುಗುವ ಎದೆಯು ಮುನಿಯು ಮನವಲ್ಲಾಡೆ,
ಮರೆವು ಅವನನು ಮುಸುಕುವಂತೆ—ಪೆರೆಮೊಗ ಬಾಡೆ,
ಎದ್ದು ಹೊರಟಿದೆ ನೆಲದೊಳಿದ್ದ ಹೊಂಬಣ್ಣವದು;
ಇದ್ದಲಿನ ಹುಡಿಯೆರಚಿದಂತೆ ಕತ್ತಲೆ ಕವಿದು
ಎತ್ತಲೂ ಹರಡಿಹುದು,
ಗೊತ್ತಾಗದೇನೊಂದು,
ಹೊತ್ತು ಎಂತಹದಿಂದು ?
ಹೀಗೇತಕಾಗಿದೆಯೊ ! ಹಾಂ ! ತಿಳಿದೆ, ಅಹುದು !
ಈಗ ಚಂದ್ರನಿಗೆ ಗ್ರಹಣದ ಸಮಯವಿಹುದು !

* * * *

೫

ಗ್ರಹಣಸಮಯವು ಇಹುದು; ಕುಹಕಿಯಹ ಗರವೊಂದು
ಗುಹೆಯಂತೆ ಬಾಯ್ದೆರೆದು ನೊಣೆಯಲಿಕೆ ನಿಂದಿಹುದು.

——— ಇಪ್ಪತ್ತಾರು ———

ಎಂತಲೇ ತಿಂಗಳಿನ ಕಾಂತಿ ಕುಂದುತಲಿಹುದು—
ಇಂತಹನ ಹಿಂಸಿಸುವುದೆಂಥ ಗರವಿರಬಹುದು ?
ಚೆಲುವಿಕೆಗೆ ನೆಲೆಯಿವನೆ,
ಒಲವಿನಾ ಸೆಲೆಯಿವನೆ,
ಕಳೆಯ ಹಿರಿಹೊಳೆಯಿವನೆ !
ಅಯ್ಯೊ, ಏನನ್ಯಾಯ ! ಈತಗೂ ಹಗೆಯೆ ?
ಅಯ್ಯ ! ಜಗದೊಡೆಯ ! ನಿನಗೆಲ್ಲವಿದು ನಗೆಯೆ ?

೬

ಕೇಡು-ಹಗೆ-ಪೀಡೆ-ಗರ ಕಾಡಬಹುದಾರನ್ನು ?
ಖೋಡಿ-ಕೇಡಿಗ-ಕವಡಿಯಾದ ನಾಡಾಡಿಯನು !
ಜಗದಾಪ್ತನೀತ, ಇವನಿಗು ಹಗೆಗಳಿಹರೇನು ?
ಜಗವನೇ ಸೊಗದೊಳಿಡೆ ಹಗಲಿರುಳು ಹವಣಿಪನು.
ಎಳೆಯರೆಲ್ಲರು ಇವನ
ಕಳೆಗಳಿಗೆ ಮನಸೋತು,
ಒಲವಿನೊಲವಾಗಿರುವ
ತಮ್ಮ ತಾಯಿಗೆ ತಮ್ಮನೆಂದು ತಿಳಿಯುವರು—
' ನಮ್ಮ ಚಂದೂಮಾಮ ' ಎನುತ ಹಿಗ್ಗುವರು.

೭

ಕೊಡುಗೂಸುಗಳು ಇವನ ಬೆಡಗು-ಗಾಡಿಗೆ ಬೆರೆತು,
ಪಡೆಯಲಿಹ ಒಡನಾಡಿ ಪೆರೆಯಂತೆ ಇರಲೆಂದು,
ಮನದೆರಕದಿಂದ ಮೈಮರೆದು ಲಜ್ಜೆಯನುಳಿದು
' ಇನಿಯ ಚಂದ್ರಮರಾಯ ! ' ಎಂದು ಒಕ್ಕಣಿಸುವರು.

——— ಇಪ್ಪತ್ತೇಳು ———

ನಲ್ಲ-ನಲ್ಲೆಯರೊಂದಿ
ಚೆಲ್ಲಾಟಗಳನಾಡೆ—
ಉಲ್ಲಸದೊಳೋಲಾಡೆ—
ಎಲ್ಲರೀ ಚೆಲ್ಲಿಗನ ಕೆಳೆಯ ಬಯಸುವರು—
'ಇಲ್ಲ ಸರಿ ಇದಕೆ'ನುವ ಸೊಗವ ಸಾರುವರು.

೮

ಬಾಳುವೆಯ ತಿರುಳಿಂದು ತಿಳಿದ ಹಸುಮಕ್ಕಳನು
ಹೇಳಲಾಗದ ಹೃದಯದೊಲವಿಂದೆ ತಾಯಿದಿರು
ಬಲು ಮುದ್ದುಮಾಡಿ ಕರೆಯುವರಾವ ಹೆಸರಿಂದೆ ?
'ಚೆಲುವ ಚೆಂದಿರ !' ಎಂದೆ—ಬೇರೆ ಇನ್ನಾವುದಿದೆ ?
ಎಲ್ಲರೊಲವಿನ ಸರಿಗೆ
ಸಲ್ಲುವಂತೆಯೆ ತೂಗೆ
ಇಲ್ಲವೀತನ ಹಾಗೆ !
ಮಾತಿನಾಚೆಯು ಬಗೆಯು ಮೌನಗೀತವ ಹಾಡಿ,
ಈತ ಜಡಗಳನು ಸಹ ನಲಿಸುವನುಸಿರ ನೀಡಿ.

೯

'ಸುರರ ಗರುವಿಕೆಯೇನು ? ನರರ ಕಿರುಕುಳವೇನು ?
ಸರಿಯೆ ಎಲ್ಲರು !' ಎಂಬ ಸಮದರ್ಶಿ ಚಂದಿರನು—
ಸುರಿಸುತಿರುವನು ನಿರುತ ಧರೆಗೆ ಸವಿಸೊದೆಯನ್ನು ;
ಸರಿಹೋಲುವರಾರು ಈ ಯೋಗಿರಾಜನನು ?
ಇವನೊಡನೆಯೂ ಹಗೆಯೆ ?
ಇವನಲಿಯು ಕೀಳ್‌ಬಗೆಯೆ ?
ಇವನಿಗೂ ತಗುಬಗಿಯೆ ?

ರವಿಯ ರಾಜ್ಯದೊಳು ಕಾವಳದ ಹಾವಳಿಯೆ ?
ಸುವಿಮುಕ್ತ ಜೀವರಿಗು ಭವದ ಬಳಲಿಕೆಯೆ ?

೧೦

ಭಂಗಕೊಳಗಾಗಿಸಲು ತಿಂಗಳಿನ ತಪ್ಪೇನು ?
ಕೊಂಗಿಗಳು ಒಪ್ಪು-ತಪ್ಪುಗಳ ನೋಡುವರೇನು ?
ಬಹುಜನಕೆ ಬೇಕಾದ ಮಹಿಮನನು ಕಂಡೊಂದು
ಕುಹಕಿ ತಾ ಸಹಿಸದೆಯೆ ಬರಿದೆ ವೈರವ ತಳೆದು—
ಖೋಡಿಗಳೆಯುತೆ ಹಳಿದು,
ಕಾಡಿ ಪೀಡಿಸುವುದಿದು
ರೂಢಿನಿಯಮವೆ ಇಹುದು.
ಹಾಲಗಡಿಗೆಯಲಿ ಹುಳಿಬೆರಸಿ ಹಿಗ್ಗುವುದು,
ಕೀಳುಜೀವದ ಹುಟ್ಟುಗುಣವೆ ಆಗಿಹುದು.

ನೊಣೆಯಲಿಕೆ ಬಂದಿರುವ ಹಗೆಯನ್ನು ಹಣಿದು,
ಮಿನುಗದಿಹನೇ ಮುನ್ನಿನಂತೆ ಪೂರ್ಣೇಂದು ?

★ ★ ★

——— ಇಪ್ಪತರೊಂಬತ್ತು ———

( ಒಂದು ಕತೆ )

ಚೆಲುವು ಹಿರಿಯದೊ—ಹೃದಯ-
ದೊಲವು ಹಿರಿಯದೊ ?
ಚೆಲುವಿನಲಿಯೆ ಒಲವು ಇಹುದೊ ?
ಒಲವಿನಲಿಯೆ ಚೆಲುವು ಇಹುದೊ ?

ಎಳೆಯ ಚೆನ್ನನೊಬ್ಬನಿಂದು
ಕೆಲೆದು ಕುಣಿದು ಆಡಿ ಹಾಡಿ,
ಕುಳಿತ ಜನರ ಕಣ್-ಮನಗಳ
ಸೆಳೆದುಕೊಂಡ ಸೊಬಗನೂಡಿ.

ನೆರೆದ ಮಂದಿಯಲ್ಲಿ ಒಂದು
ಕರಿಯ ಕೂಸನೆತ್ತಿಕೊಂಡ
ಗರತಿಯೊಬ್ಬಳವನ ಮೆಚ್ಚಿ,
ಕರೆದಳು ಬಳಿ ಆಗಿ ಹುಚ್ಚಿ.

ಗದ್ದವಿಡಿದು ಮೈಯ ತಡಹಿ
ಮುದ್ದನೀಯುತಿರಲು, ತನ್ನ
ಮೊದ್ದು ಕೂಸು ಕೂಗಿ ಅಳಲು,
ಇದ್ದುದಿದ್ದ ಹಾಗೆ ಅವಳು :

‘ ಅಮ್ಮ, ನನ್ನ ಹಡೆದ ತಂದೆ !
ಸುಮ್ಮನಾಗು ಸೊಗಡ ಕಣಿ !
ಅಳುವೆಯೇಕೆ ಕಣ್ಣಮಣಿ,
ಮೆಲುಮಾತಿನ ಅರಸುಗಿಣಿ ! ’

‘ ಏತಕಳುವೆ ನನ್ನ ಕಂದ,
ನಿಲ್ಲಿಸಳುವ ನಗುವ ಚಂದ !
ಕೊರಳ ಹೊನ್ನಸರದ ರನ್ನ !
ತೊಳೆದ ಮುತ್ತೆ, ಹೊಳೆವ ಚಿನ್ನ ! ’

ಎಂದು ಮಗುವನೆದೆಯೊಳಿಟ್ಟು
ಒಂದೆಸವನೆ ಮುತ್ತುಕೊಟ್ಟು
ಕಂದನನ್ನು ಸಂತವಿಟ್ಟು
ನಲಿವ ಪಡೆದಳು.

ಅಂದದೋರಿದೆಳೆಯ ಕಂದ
ಬಂದು ಬಳಿಗೆ ನಿಂದು ಇರಲು
ಮುಂದೆ ಕರೆದು ಮುದ್ದನಿಡಲು
ಮರೆತೆ ನಡೆದಳು.

* * *

ಚೆಲುವು ಹಿರಿಯದೋ—ಹೃದಯ-
ದೊಲವು ಹಿರಿಯದೊ ?
ಚೆಲುವಿನಲಿಯೆ ಒಲವು ಇಹುದೊ ?
ಒಲವಿನಲಿಯೆ ಚೆಲುವು ಇಹುದೊ ?



೧

ಹಗಲು ಮುಗಿವ ಸಮಯ; ದಿನಪ ಜಿಗಿಯಲಿದ್ದ ಬಾನಿನಿಂದೆ.
ಒಗೆದು ಸಂಜೆಗೆಂಪ ತುಂಡುಮುಗಿಲುಗಳಿಗೆ ಬಣ್ಣ ಬರೆದು,
ಪಸಲೆನೆಲಕೆ ಸೊಬಗ ಸಲಿಸಿ, ಹಸಿರಿನೆಲೆಯ ಕಳೆಯ ಬೆಳಸಿ,
ಮಿಸುನಿವಿಸಿಲ ಪಸರಿಸುತಲಿ ರಸೆಯನಾತ ರಂಜಿಸಿದ್ದ.
ಕಾಲವೇನೊ ಬಾಳ ಸೊಗಸು
ಎಲ್ಲ ಕಡೆಗು ಚೆಲ್ಲ ಬೆಳಸು.
ಬಯಸಿತದನು ಉಣಸು ಮನಸು,
ಬಳಿಯಲಿರುವ ಗೆಳೆಯರನೂ ಬರಲು ಕರೆದೆನು -
ಹೊಳೆಯ ತಡಿಯ ತೋಟದೆಡೆಗೆ ಹೊರಟು ನಡೆದೆನು.

೨

ಗೆಳೆಯರೊಡನೆ ಕೆಲೆದು ನಗುತ ಹೊಳೆಯ ಬಳಿಗೆ ಬರುತಲಿರೆ—
ಬಲದ ಬದಿಗೆ ಹೊಂದಿಯಿರುವ ತಳಿತ ಹೊಂಗೆಮರವ ಕಂಡೆ;
ತಿಳಿಯ ಹಸಿರಿನೆಳೆಯ ತಳಿರು, ಬೆಳೆದ ಹಸಿರ ಬಲಿತ ತಳಿರು,
ಇಳಿಯ ಬಿಸಿಲಿನೊಳುಪ ಹೊರೆದು, ಸುಳಿವ ಗಾಳಿಗೊನೆದು ತೊನೆದು
ಸೂಸುತಿದ್ದುವಲ್ಲಿ ನಗೆಯ,
ಸೂರೆಗೈದುವೆನ್ನ ಬಗೆಯ,
ಮುಂದಕಿರಿಸದಾದೆನಡಿಯ;
ತಳಿರ ಸೊಬಗಿನಲಿಯೆ ನೋಟ ನೆಲಸಿ ನಿಂದೆನು;
ಚೆಲುವನಿದನು ಕಳೆದು ನಡೆವುದೆಂತು ಎಂದೆನು!

೩

ಒಡನೆ ಕೆಳೆಯರಿದ್ದರಲೆ? ನಡೆದುಬಿಟ್ಟರವರು ಮುಂದೆ;
ತಡೆವುದೆಂತು ನಾನು ಹಿಂದೆ? ಹಾಗೆ ನಸುವೆ ನಿಂತು ಬಗೆದೆ:

ಮನವನೆಳೆದುಕೊಂಡ ತಳಿರ ಗೊನೆಯನೊಂದ ಮುರಿದುಕೊಂಡೆ,
ಎನಿತೊ ನಲುಮೆಯಿಂದಲದನು ತನುವಿಗೊತ್ತಿಕೊಳುತ ನಡೆದೆ.
ಅಡಿಯನಿಟ್ಟೆ ಬೇಗ; ಮುಂದೆ
ನಡೆದಿರುವರ ಸಾರಿ ಬಂದೆ;
ನಡೆಯಿತೆನಿತೊ ಮಾತು ಅಂದೆ.
ಓತು ತಂದ ಗೊನೆಯ ತಳಿರನೊಂದನೊಂದನು—
ಮಾತಿನಲ್ಲಿ ಮರೆತು ಹರಿದು ಹಿಸುಕಿ ಒಗೆದೆನು.

೪

ಬಂದೆವಾಗ ಬನಕೆ; ಒಡನೆ ಬಂದ ಕೆಳೆಯರವರು ಕಲ್ಲಿ-
ನೊಂದು ಜಗುಲಿಯಲ್ಲಿ ಕುಳಿತು, ಮುಂದೆ ಸಾಗಿಸಿದರು ಮಾತು
ಕುಳಿತುಕೊಳ್ಳಲಿಲ್ಲ ನಾನು, ಉಳಿದೆನವರ ಬರಿಯ ಹರಟೆ;
ಸುಳಿದು ಬರುವೆ ಬನದೊಳೆಂದು ಅಲೆದಾಡುತ ಹಾಗೆ ಹೊರಟೆ.
ಕಂಪಿನೆಲೆಯ ಗಿಡಗಳೇನು !
ಜೊಂಪಿನಲರ ಲತೆಗಳೇನು !
ಸೊಂಪ ನೋಡಿ ತಣಿದೆ ನಾನು.
ಎಡೆಯೊಳೊಂದು ಒಳುಗುಲಾಬಿಗಿಡವ ಕಂಡು ತಡೆದೆನು;
ಗಿಡದೊಳಿದ್ದದೊಂದೆ ಹೂವ ಬೆಡಗನೇನನೆಂಬೆನು ?

೫

ಹಸಿರುತಳಿರ ತುತ್ತತುದಿಗೆ ಮಿಸುಕಾಡುತ ಮೆಲುಗಾಳಿಗೆ—
ಎಸೆಯುವರಳ ಕಂಡು ಕಣ್ಣ ಹಸಿವು ಹೆಚ್ಚೆ, ನಿಂತೆ ಹಾಗೆ.
' ಹಸಿರು ಸೀರೆಯುಟ್ಟು ಸೆರಗ ಮುಸುಕಿ ತಾಯಿ ಮಲಗಿಸಿರಲು—
ಮುಸುಕ ಸರಿಸಿ ತಾಯ ನೋಳ್ಪ ಹಸುಳೆಯ ಮೊಗವಿದುವೊ ?' ಎಂದೆ.

ನಲ್ಲ ಬಿನದದಲ್ಲಿ ನುಡಿದ
ಲಲ್ಲೆಮಾತುಗಳಿಗೆ ನಾಚಿ,
ನಲ್ಲೆ ತನ್ನ ಸೆರಗ ಚಾಚಿ—
ಚೆಲ್ವಮೊಗವ ಮುಚ್ಚಿಕೊಳಲು ಸೆರಗು ಸರಿದು ತೋರುವ—
ಗಲ್ಲದ ತೆರ ಬೀಂತರಳು ಹೊಸತುಬಗೆಯ ಚೆಂದವ

೬

‘ಇನಿದುತಿನಿಸ ನಿನಗೀಯುವೆ, ಕುಣಿಕುಣಿಯುತ ಬಳಿಗೆ ಬಾರೊ!’
ಎನುತ ಕರೆಯೆ ನಮ್ಮ ಮುದ್ದು ಮಿನುಗುನಗೆಯ ಮೊಗದಿ ಬಂದು,
ಕೈಯ ನೀಡಿ ಬೇಡಲದನು, ‘ಬಾಯನು ತೆರೆ’ ಎನಲು ನಾನು,
ಬಾಯ ತೆರೆದು ನಿಲ್ಲಲವನ ಬಾಯಿ ಹೀಗೆ ಹೊಳೆವುದಲೇ ?’—
ಹೀಗೆ ಎನಿತೊ ಮನದಿ ಬಗೆದೆ,
ಎವೆಯಿಕ್ಕದೆ ನೋಡುತಿದ್ದೆ,
ನೆಟ್ಟ ದಿಟ್ಟ ಕೀಳದಾದೆ.
ಕಳೆದೆನಿಂತದೇಸೊ ಕಾಲ; ಬಳಿಕ ಮೆ-ಲ್ಲ-ಕೆ—
ಅಲರ ಕೊಯಿದುಕೊಂಡು ಮರಳಿ ನಡೆದೆ ಹಿಂದಕೆ.

೭

ಎತ್ತಿಕೊಂಡು ಕೈಗೆ ಹೂವ, ಮುತ್ತುಕೊಟ್ಟೆ ಮೋಹದಿಂದೆ;
ಒತ್ತಿಕೊಂಡೆ ಗಲ್ಲಗಳಿಗೆ, ಮತ್ತೆ ಮತ್ತೆ ಮೂಸಿ ನಲಿದೆ.
ಬೆರಳಿಂದಲಿ ತಿರುಗಿಸುತಲಿ, ಮರಳಿ ಮರಳಿ ನಿರುಕಿಸುತಲಿ,
ಅರಿವು ಇರದ ತೆರದಿ ನಡೆದುಬರುತ ಕೆಳೆಯರನ್ನು ಕಂಡೆ.
ನಡೆದೆ ಇದ್ದಿತವರ ಮಾತು,
ಹರಟೆಗೆನ್ನ ಮನವೆಳಸಿತು,
ವಾದ-ಚರ್ಚೆ ಬಲು ನಡೆಯಿತು.

ಹುರುಳು ಇರದ ಹರಟೆಗಳಿಗೆ ಮನವನಾಗ ಮಾರಿದೆ;
ಅರಳಿನೆಸಳನೊಂದೊಂದನು ಹರಿದು ಹೊಸೆದು ತೂರಿದೆ.

೮

ಕೊನೆಯ ಕಾಣಲಿಲ್ಲ ಮಾತು ; ದಣಿದು ನಿಲ್ಲಿಸಿದೆವು ವಾದ ;
' ಮನೆಗೆ ತೆರಳೆ ಸಮಯವಾಯ್ತು !' ಎನುತಲೆಲ್ಲರೆದ್ದೆವಾಗ—
ಕೆಳಗೆ ನೆಲದಿ ಬಾಡಿ ಬಿದ್ದ ಅಲರಿನೆಸಳುಗಳನು ಕಂಡೆ ;
ಮರವೆ ತೊಲಗೆ, ನನ್ನ ಹುಚ್ಚನರಿದು ಹೀಗೆ ಎಂದುಕೊಂಡೆ :
' ಅಲ್ಲಿ ತಳಿರ ಮುರಿದುದೇನು !
ಇಲ್ಲಿ ಹೂವ ಕೊಯ್ದುದೇನು !
ಮಾತಿಗೆ ಮರುಳಾದುದೇನು !
ಒಲಿದು ತಂದ ಚೆಲುವಿನೊಡವೆ ಬರಿದೆ ಮಣ್ಗೆ ಚೆರಸಿದೆ ;
ಗಳಿಗೆಗಾಗಿ ಮಳಿಗೆ ಸುಡುವ ಮೂಳನಂತೆ ಮಾಡಿದೆ.

೯

' ಮುರಿದು ನಾನು ಕಿಡಿಸದಿರಲು ಮೆರೆಯುತಿದ್ದಿತಲ್ಲಿ ತಳಿರು ;
ಹರಿದು ಹೊಸೆದು ಹಾಕದಿರಲು ಮಿರುಗುತಿದ್ದಿತಿಲ್ಲಿ ಅಲರು.
ಹಲವರಿಂದರ ಚೆಲುವ ನೋಡಿ ನಲಿವನಾನುತಿರ್ದರಲೆ ?
ಚೆಲುವ ಬೇಟೆಯಾಡಿ ಕಣ್ಗೆ ಬಲಿಯ ಸಲಿಸಿಕೊಂಡೆನಲೆ ?
ಇಳೆಯ ಕಳೆಯ ಕಿಡಿಯನೊಂದು
ತೊಳೆದು ಬಿಟ್ಟೆ ನಾನು ಇಂದು ;
ನುಡಿದೆನಿಂತು ಒಳಗೆ ನೊಂದು
ಬಗೆವ ಬಗೆಯ ಮುಗಿದ ಬಾಯ ದುಗುಡವೊಗೆದ ಮೊಗದಲಿ,
ಮುಗುದನಂತೆ ನಡೆಯುತಿರ್ದೆನಾಗ ನಾನು ಮಾತಿಲಿ !

* * * *

ಚೆಲುವಿಗೊಲಿದು ತಳಿರ ಅಲರ ಕೊಂಡುದೇನು ತಪ್ಪೊ ?
ಬಳಿಕ ಅದರ ಅಳಿವಿಗಾಗಿ ನೊಂದು ನುಡಿದುದೊಪ್ಪೊ ?

——— ಮೂವತ್ತೈದು ———

ಕೌರವರ ಮಂತಣಗಾರನಾದ ಶಕುನಿ ಮಾಡಿದ ಕಾರ್ಯ ಅಕಾರ್ಯವೆಂದ ನಿಂದಿಸುವುದು, ಅಜ್ಞಾನದ ಪರಿಣಾಮವೆಂದು ಭಾವಿಸಬಹುದಲ್ಲವೆ?

೧

ಧೀರುರೇ, ಭಲಭಲರೆ! ಶಕುನಿಯೇ ನಾ ನಿನಗೆ
ತಲೆವಾಗಿ ವಂದಿಸುವೆನೈ!
ಭಾರತೀಯರ ಮೇಲೆ ನೀ ಮಾಡಿದುಪಕಾರ
ಭಾರವಾಗಿಹುದು ಕಾಣೈ!

೨

ನಿನ್ನ ಕೈಚಳಕದಾ ಕೊಲಬನರಿಯದೆ ನಿನಗೆ
ಹಳಿವನ್ನು ಹೊದ್ದಿಸುವರು—
ಬಣ್ಣವನೆ ನೋಡಿ ಕೋಗಿಲಿಗೆ ಕರಿಗಾಗೆಯೆಂ-
ದೆನುವ ಮತಿಮಂದಜನರು!

೩

ಮುಳ್ಳ ಮೆಳೆಯಲ್ಲಿರುವ ಹೊಸಜೇನುಹುಟ್ಟಿನಲಿ
ಇನಿರಸವು ತುಂಬಿರುವೊಲು—
ಸುಳ್ಳಲ್ಲ, ನಿನ್ನ ಪ್ರತಿಯೊಂದು ಕೃತಿಯೊಳಗೊಳಗೆ
ಹುರುಳು ಹುದುಗಿಹುದು ಕೇಳು!

೪

ನೀನಿಲ್ಲದಿರಲು ಭಾರತದ ಹಿರಿಹೊತ್ತಗೆಯು
ತಿರುಳಿಲ್ಲದಾಗಿರುವುದು—
ತನಿರಸವನೆಲ್ಲವನು ಹಿಂಡಿ ಹೊರದೆಗೆದ ಕ-
ಬ್ಬಿನ ಕೋಲಿನಂತಿರುವುದು.

೫

ಸುಜನರನು ದುರ್ಜನರು ಯುಗ-ಯುಗಗಳಲ್ಲಿಯೂ
ಪೀಡಿಸುವರೆಂಬುದನ್ನು
ತ್ರಿಜಗಕ್ಕೆ ತಿಳುಹಲಿಕೆ ಭಾರತದ ನಾಟಕದಿ
ಸೂತ್ರಧರನಾದೆ ನೀನು!

೬

ಧರ್ಮರಾಯನ ಧರ್ಮನಿಷ್ಠೆ, ಭೀಮನ ಬಲುಹು,
ಅರ್ಜುನನ ಅಸ್ತ್ರದರಿವು,
ನಮ್ಮೆಲ್ಲರಾ ಕಂಗಳೆದುರಿನಲಿ ಕುಣಿಯುವುದು
ನಿನ್ನ ಗೈಮೆಯ ಫಲಿತವು!

೭

ದುರ್ಯೋಧನನ ಧೈರ್ಯ-ಚಲದಂಕತನವ, ವಿದು-
ರನ ವಿಷ್ಣುಭಕ್ತಿಯನ್ನು,
ಸೂರ್ಯಾತ್ಮಜನ ದಾತೃಗುಣವ ಡಂಗುರ ಹೊಯ್ದು
ಜಗದಿ ಸಾರಿದೆಯೊ ನೀನು!

೮

ಪಾಂಚಾಲಿನಿಯ ಪಾವನತೆಯು ಪಸರಿಸುವುದಕೆ
ನೆರವು ನೀ ನೀಡಿದೆಯಲಾ?
ಚಂಚಲಾಕ್ಷಿಯ ಹೆಸರನಾರು ತಿಳಿಯುತ್ತಿರ್ದ-
ರೈ, ಪೇಳು ನೀ ಸೌಬಲಾ!

——— ಮೂವತ್ತೇಳು ———

೯

ಕುರುವಂಶಜಾತರನು ಹುರಿಗೊಳಿಸಿ ಸಂಗರಕೆ
ಪರಮಾತ್ಮ ಕೃಷ್ಣನಿಂದೆ—
ಪರಮಗೀತೆಯನು ಹಾಡಿಸಿದೆ, ಜಗಕೆಲ್ಲ ಉಪ-
ಕೃತಿಯು ಹೊರೆಯನು ಹೊರಿಸಿದೆ!

೧೦

ಇನ್ನೊಂದು ಬಂದು ನೀ ಭರತಖಂಡವಲಿ ಹೂ-
ಡುವೆ ನಿನ್ನ ನಾಟಕವನು?
ಮನ್ನೆಯನೆ ತಿಳುಹುವುದು ಜನಕೆ 'ಸತ್ಯಕ್ಕೆ ಜಯ-
ವುಂಟೆ'ಂಬ ತತ್ತ್ವವನ್ನು!

೧೧

ಧೀರುರೇ, ಭಲಭಲರೆ! ಶಕುನಿಯೇ ನಿನಗೆ ನಾ
ತಲೆವಾಗಿ ವಂದಿಸುವೆನು.
ಭಾರತೀಯರಿಗೆಲ್ಲ ಜೀವನದ ಸಾರವನು
ಕಲಿಸಲಿಕೆ ಬೇಕು ನೀನು!

* * *

( ಒಂದು ಶೋಕಕಥನ )

ತಿರುಗುತ ತಿರುಗುತ ಹೊರಟೆನು ಕುಮರಿಯ ಹೊಲದ ಕಡೆಗೆ ನಾನು,
ಇಳಿನೇಸರ ವೇಳೆಯಲಿ ನೋಡಲಿಕೆ ಸೃಷ್ಟಿಯ ಶೋಭೆಯನು.
ಶರತ್ಕಾಲದಾ ಭೂರಮಣಿಯ ಮೆಯ್‌ಸಿರಿಯನು ನೋಡುತಲಿ
ಹರುಷವು ಹೆಚ್ಚುತ ಹೃದಯದಿ ಹಿಡಿಸದೆ ಹೊಮ್ಮಿತಾಕ್ಷಣದಲಿ!

ಹುರುಳಿ ಹೆಸರು ಅಲಸಂದೆಯವರೆಗಳ ಬಳ್ಳಿಯು ಬಿತ್ತರಿಸಿ,
ಧರಣಿಯು ಧರಿಸಿದ ಹಸಿರುಡಿಗೆಯ ತೆರ ತೋರಿತು ಕಂಗೊಳಿಸಿ.
ಕರಿಯ ಕುಪ್ಪಸಕೆ ಹಸಿರು ನವಿರೆಳೆಯ ಸುಳಿವು–ಮೊಗ್ಗೆ ತೆಗೆದು,
ಧರಿಸಿದ ಪರಿಯಲಿ ಎರೆಯ ನೆಲದ ಹತ್ತಿಯ ಬೆಳೆ ಮಿರುಗಿದುದು.

ಕಿರುಮುತ್ತುಗಳೊಳು ಸಮೆದ ಪೆಂಡೆಯದ ದಂಡೆಯ ತೆರದಿಂದೆ
ಹುರಿನವಣೆಯ ತೆನೆಗಳು ತೊನೆದಾಡುತ ಮೆರೆದುವಂದದಿಂದೆ.
ಜೋಳದ ಬೆಳೆಯನು ಕೊಯಿದೊಟ್ಟಿದ ಗೂಡುಗಳೋರಣದಿಂದೆ
ತೋರಿದುವಾ ಭೂರಮಣಿಯ ಧಾನ್ಯಾಗಾರದಂದದಿಂದೆ.

ಇಂತಿದನೆಲ್ಲವ ನೋಡುತ ನಡೆದಿರೆ, ಬಾಯಿಜಾಳಿಗೆಯಲಿ
ಬಾಯನು ಬಿಗಿದಾ ಹೋರಿಯೊಂದು ನಿಂದಿಹುದಾ ಹೊಲದಲ್ಲಿ.
ಸುತ್ತಲೆಲ್ಲವೂ ಕತ್ತಲಿಸಿರೆ ಬೆಳೆ, ಅದನು ನೋಡದಿಹುದು;
ಕುತ್ತದಿ ಸಿಲುಕಿದವೊಲು ಕಂಬನಿಗಳ ಸುರಿಸುತ ತಾಸಿಹುದು

ಮರುಕ ಮೂಡೆ ನಾನದರ ಬಳಿಗೆ ನಡೆತಂದು ವಿಚಾರಿಸಿದೆ:
ಹಿರಿಯ ಹೋರಿ ನೀನೇತಕೆ ಅಳುತಿಹೆ? ಹೇಳೆನ್ನಯ ಮುಂದೆ.
ಇನಿತು ಕೇಳಲಾ ಬಸವನು ಬಿಸಿಯುಸಿರನ್ನು ಬಿಡುತಲಂದು,
ಬಿತ್ತರಿಸಿತು ತನ್ನಯ ಬನ್ನದ ಕತೆಯನು ಬಗೆಯೊಳು ಬೆಂದು:

‘ ಏನು ಹೇಳುವುದು ನನ್ನ ಬವಣೆಯನು ದೀನಜೀವಿ ನಾನು,
ಮಾನವರೆನ್ನನು ಕಾಡುವ ರೀತಿಯನೇನು ಬಣ್ಣಿಸುವೆನು ?

ಸಕಲ ಜೀವಿಗಳ ಸಲಹಲು ದೇವನು ನೆಲವನು ನಿಲಿಸಿಹನು ;
ವಿಕಲಮತಿಯ ಮನುಜರು ತಮ್ಮೊಬ್ಬರದೆಂದು ತಿಳಿವರಿದನು.

ಉತ್ತು ನೆಲವ ನಾ ಬಿತ್ತುವೆ ; ಕಸ-ಕಳೆ ಕಿತ್ತು ಬೆಳೆಗಳನ್ನು
ನಿತ್ಯದಿ ಸಲಹುತ ಹೊತ್ತಿಗೆ ಹೊಸ ಹೊಸ ತುತ್ತನೊದವಿಸುವೆನು.
ಹವಳದಂತೆ ಹಸನಾದ ಗೋದಿಗಳು ಹವಣದ ಕಡಲೆಗಳು.
ನವಣೆ-ರಾಗಿಗಳು ಮುತ್ತಿನ ತೆರದಲಿ ಮಿನುಗುವ ಜೋಳಗಳು !

ಮಲ್ಲಿಗೆ ಮೊಗ್ಗೆಯ ಪೋಲ್ವ ಕುಸಿಬೆ, ಮೆಲ್ಲುವ ನೆಲಗಡಲೆಗಳು
ಎಲ್ಲವು ನನ್ನಯ ದುಡಿಮೆಯಿಂದಲೇ ಮನುಜಗೆ ದೊರೆಯುವವು.
ಹಿರಿಹಿರಿಗಾಳನು ಹರುಷದಲೊಯ್ಯುತೆ ಹೊರೆಯುವರೊಡಲನ್ನು,
ತವುಡು ಸಿವುಡು ಕಸಗಾಳು ಹೊಟ್ಟನೆನಗೀವರು ಕೆಟ್ಟದನು.

ಮಿದುವಾಸಿಗೆ ಬಗೆಬಗೆಯ ಬೆಲೆಯ ಬಟ್ಟೆಗಳನು ನಿರ್ಮಿಸುವ
ಹದದ ಹತ್ತಿಯನು ಒದವಿಸಿ ಸಂತತವೀಯುವೆ ಸಮ್ಮುದವ.
ಪರಿಪರಿ ಪಯಿರು-ಬೆಳೆಗಳಿಂದಲಿ ನೆಲಸಿರಿಯನು ಸಿಂಗರಿಸಿ,
ನಿರುತವು ಸಂತಸವೀಯುವೆ ಸರ್ವಜನಂಗಳ ಮನರಮಿಸಿ.

ನನ್ನ ನೆರವಿನೊಳೆ ಮಣ್ಣು-ಕಲ್ಲು-ಮರ-ಮಟ್ಟುಗಳನು ತರುತ
ಚೆನ್ನ ಚೆನ್ನ ಮನೆಯನ್ನು ಮಾಡಿ ವಾಸಿಸುವರು ಸುಖಪಡುತ.
ನೀರನುಣಿಸಲಾ ತೋಟಕೆ ನೀರಿನ ಮೊಟ್ಟೆಯನೆಳೆಯುವೆನು ;
ಭಾರವ ಹೊರುತಲಿ ಎಲ್ಲ ಧಾನ್ಯಗಳ ಮನೆಗೊಯಿದೀಯುವೆನು.

ಇಂತು ಮನುಜರಿಗೆ ಸೌಖ್ಯದ ಸಾಧನೆ ನಿಂತು ಒದವಿಸಿದರೂ
ಸಂತತವೂ ನನ್ನಯ ಸುಖ ನೋಡದೆ ಪೀಡೆಯ ಕೊಡುತಿಹರು.
ಸದಾಕಾಲ ನನ್ನನೆ ದುಡಿಸುತೆ ಇಂತಹ ಬೆಳೆ ಪಡೆಯುವರು ;
ಇದೋ ನೋಡು, ಈ ಬಗೆ ಬಾಯ್‌ಬಿಗಿಯುತ ನನಗೇ ತಿನಗೊಡರು.

ನಾಲ್ವತ್ತು

ಹೇಳಿದಂತೆ ಕೇಳಲು ಹೆಣೆವರು ಹದಿನೆಂಟು ಹೊಂಚುಗಳನ್ನು,
ಕೋಲುಬಾರು ಹಣೆಹಗ್ಗ ಗುದಿಗೆಯಾ ಮೂಗುದಾರಗಳನು
ಹೂಂಕರಿಸೆನ್ನಯ ಬಂಧುವರ್ಗಕೀಯಲು ಎಚ್ಚರಿಕೆಯನು –
ಅಂಕಿತವಿಲ್ಲವು ನನಗೆ; ನೋಡು ಬಿಗಿದಿರುವರು ಬಾಯನ್ನು.

ನನ್ನ ದುಡಿಮೆಯೊಳೆ ಸುಮ್ಮಾನವ ಪಡೆದೆನ್ನನು ಲೆಕ್ಕಿಸದೆ
ಬನ್ನವು! ಗೋದಲೆಯೊಳಗೆ ಬಿಗಿಯುವರು ಕೊರಳುಗಣ್ಣಿಯಿಂದೆ
ಅನುಭವಿಸಲು ಸ್ವಾತಂತ್ರ್ಯವನಿಚ್ಛಿಸಿ, ಯೋಚಿಸಿ ಮನದೊಳಗೆ—
ಘನಗರ್ಜನೆಯಲಿ ಕೂಗುತ ನಾ ನಸು ಚರಿಸಲಡವಿಯೊಳಗೆ—

ದುರುಳ ಮನುಜನೀಕ್ಷಿಸಿ ಶಿಕ್ಷಿಸುವನು ಬಿಗಿದೆನ್ನನು ಕಟ್ಟಿ,
ಮರುಳನು ನಾನೀ ಧರೆಯೊಳು ಜನ್ಮಿಸಿ ಏನು ಸೌಖ್ಯ ಪಟ್ಟೆ?
ಮಾನವರಿವರಲ್ಲವು ದಾನವರೇ! ಸತ್ಯವು ತಿಳಿ ನೀನು!
ಏನು ಮಾಡಲೀ ಕ್ರೂರರ ಬಲೆಯಿಂ ಜಾರಲುಪಾಯವನು?

ನಂದಿವಾಹನಾ! ಚಂದ್ರಶೇಖರಾ! ವೃಂದಾರಕ ವಿನುತಾ!
ಬಂಧದಿಂದ ನಮ್ಮವರೆಲ್ಲರನೂ ತಾರಿಸೆನ್ನ ತಾತಾ!'
ಇಂತು ಬೆಸಸಿ ಬಿಸುಸುಯಿದು ವ್ಯಸನದಲಿ ಮಿಂದು ಗೊಂದೆ ತಾನು
ನಿಂತಿತು ಮುಗಿಲನು ನೋಡುತ ಸ್ಮರಿಸುತ ಪರಮೇಶ್ವರನನ್ನು

ಎತ್ತಿನ ಕುತ್ತದ ವೃತ್ತವನ್ನು ಕೇಳುತ್ತ ಚಿತ್ತದಲ್ಲಿ
ಒತ್ತರಿಸಿದ ವ್ಯಥೆಯನು ಹತ್ತಿಕ್ಕುತ ಮನೆಗೆ ಬಂದೆ ಮರಳಿ
ಎತ್ತಿನ ಕಥೆಗೀ ಭುವನದ ದೀನ-ದರಿದ್ರರ ಬಾಳ್ಗತೆಯು
ಸತ್ಯವು ಸಮವಿಹುದೆನ್ನುತ ಬಂದಿತು ಬಗೆಯೊಳು ಭಾವನೆಯು!
' ಸರುವ ಜೀವಿಗಳಿಗೂ ಸ್ವಾತಂತ್ರ್ಯದ ಸುಖವನಿತ್ತು ನೀನು
ಪೊರೆಯೊ!' ಎನುತ ಪರಮಾತ್ಮನ ಮನದೊಳಗಂದು ಧ್ಯಾನಿಸಿದೆನು.



೧

ಕೂಗುತಲಿದೆ ಕಹಳೆಯು—
ನವಯುಗ ವೈತಾಳಿಯು!
'ಬಾಳಿದು ಕಾಳಗದ ಕಣ!'
ಹೇಳುತಿರುವುದಿಂತಾ ಸ್ವನ!
ಕೂಗುತಲಿದೆ ಕಹಳೆಯು....
ನಮಯುಗವೈತಾಳಿಯು!

೨

'ಬೇಡ ಕದನ' ಎಂದೊರೆವಾ
ಕೇಡುಗಾರನೆಲ್ಲಿರುವ....?
ಹೇಡಿ ಏನ ಬಲ್ಲನವ?
ನಾಡಿಗೆ ಕಾಳಗವೆ ಜೀವ!
ಕೂಗುತಲಿದೆ ಕಹಳೆಯು....
ನವಯುಗವೈತಾಳಿಯು!

೩

ಗೆಳೆಯರಂತೆ ನಟಿಸುತೆ ಹಗೆ-
ಬಳಗ ನಮ್ಮ ಬೀಡಿನೊಳಗೆ
ತಿಂದು ತೇಗಿ ಬಾಳುತಿದೆ....
ಕೊಂದೆಲ್ಲರನಾಳುತಿದೆ!
ಕೂಗುತಲಿದೆ ಕಹಳೆಯು
ನವಯುಗವೈತಾಳಿಯು!

೪

‘ ಈ ಸ್ಮಶಾನ ಶಾಂತಿಯು
ಶಾಂತಿಯೆ ಇದು ? ಭ್ರಾಂತಿಯು !
ನಿಮ್ಮೆಲ್ಲರ ಮಾನವತನ
ಬೇಯುತಲಿದೆ ನೋಡಿರದನ’....
ಕೂಗುತಲಿದೆ ಕಹಳೆಯು,
ನವಯುಗವೈತಾಳಿಯು !

೫

‘ ಬದುಕಿದುದಕೆ ಕುರುಹಾವುದು ?
ಕದನವೆ ಸರಿ ಬೇರಾವುದು ?
ಜೇಡ ಕದನವೆಂಬ ರೀತಿ—
ಹೇಡಿಯದಿದು ಹೆಣದ ನೀತಿ ! ’
ಕೂಗುತಲಿದೆ ಕಹಳೆಯು,
ನವಯುಗವೈತಾಳಿಯು !

೬

‘ ಅಕ್ಕ-ತಾಯಿ-ತಂಗಿಯರು
ಅಕ್ಕರೆಯಾ ಅಂಗನೆಯರು—
ನಿಮ್ಮ ಬಲುಹು ಬೀರತನ
ನೋಡಿ ನಲಿವೆವೆಂಬರು ದಿನ. ’
ಕೂಗುತಲಿದೆ ಕಹಳೆಯು,
ನವಯುಗವೈತಾಳಿಯು !

೭

‘ ಬಿಡಿರಿ ಬಿಡಿರಿ ಹಳೆಯಾಯುಧ,
ಕೊಡಲಿ ಕತ್ತಿ ಬಿಲ್ಲು ಗದಾ—
ಹೊಸತು ಕಾಲ, ಹೊಸ ಕಾಳಗ,
ಹೊಸಕೈದುವ ಹುಡುಕಿರೀಗ.
ಕೂಗುತಲಿದೆ ಕಹಳೆಯು,
ನವಯುಗವೈತಾಳಿಯು !

೮

‘ ಬಲಿದಿರುವುವೆ ಜಾಲಗಳು ?
ಬಳಸಿರುವುವೆ ಬೇಲಿಗಳು ?
ಹರಿದೊಗೆಯಿರಿ ಕೊಳೆತ ಜಾಲ
ಮುರಿದೇಳಿರಿ ಹುಳಿತ ಬೇಲಿ! ’
ಕೂಗುತಲಿದೆ ಕಹಳೆಯು,
ನವಯುಗವೈತಾಳಿಯು !

೯

‘ ಕೇಳಿ ಕೇಳಿ ಕಹಳೆಯ,
ಕೆಲದೊಳೆ ಇದೆ ಪಾಳೆಯ !
ಕಾಳಗಕೆದ್ದವ ಬಾಳುವ,
ಎದ್ದಿದ್ದರವ ಬೀಳುವ!
ಕೂಗುತಲಿದೆ ಕಹಳೆಯು
ನವಯುಗವೈತಾಳಿಯು !

* * *

ಬೆಳಕನೆರಚು, ಬೆಳಕನೆರಚು,
ಯುಗ-ಯುಗಾಂತ ತೊಳಗಲಿ !
ಇಳೆಯ ಕವಿದ ಕತ್ತಲೆಯನು
ಕಳೆದೊಗೆ ದೀಪಾವಳಿ !

೧

ಬರಿಯೆ ಒಂದೆ ಇರುಳು ಬಂದೈ,
ಮುಗಿಯಿತೇನು ಕಾರ್ಯ ?
ವರುಷದಿ ನೂರಾರು ತಮಸಿ-
ನಿರುಳಿವೆ ಅನಿವಾರ್ಯ !
ಆಂದಂದಿನ ಕತ್ತಲಿಂದೆ
ಮಂದಿಯು ಮನವಿಡಿದು ಮುಂದೆ
ಕರೆದೊಯ್ಯುವರಾರ್ ಆನಂದೆ—
ಮರೆದು ಸರಿಯೆ ನೀನು ?
ಮಿರುಗಿ ಮಾಯವಾಗುತಿರುವ
ಮಿಂಚಿಗೆ ಬೆಲೆಯೇನು ?

೨

ನಿನಗಾಗಿಯೆ ಹೊಲ-ನೆಲಗಳು
ಬೆಳೆಯೊಳೇರಿ ನಿಂತಿವೆ;
ನಿನಗಾಗಿಯೆ ಹೊಳೆ-ಕೊಳಗಳು
ತಿಳಿಯು ನೀರನಾಂತಿವೆ.
ಬಿಳಿಯ ಹೊನ್ನ ಸೇವಂತಿಗೆ
ಥೊಳೆದು ನಿನ್ನ ಮೈಕಾಂತಿಗೆ

ಸವಿಗಾರರ ಬಗೆಯು ಸೆಳೆವ
ತವಕದಿ ಬಾಯ್ದೆರೆದಿವೆ—
ಬುವಿಯು ಜೀವಕುಲವೆ ದೇವ-
ದಿನವೆ ನಿನ್ನ ಕರೆದಿವೆ !

೩

ಬರುವುದು ದೀವಳಿಗೆಯೆಂದು
ತಿರೆಯೇ ಕುಣಿ-ಕುಣಿಯಿತು !
ತರುವುದು ಹಿರಿಬೆಳಕನೆಂದು
ಜನವು ದಿನವು ನೆನೆಯಿತು !
ಸಂತೆಗೆ ಹಸರಿಗನು ಬಂದು
ಸಂತೆ ಹರಡಿ ದಿನವದೊಂದು
ಕಂತೆ ಹೇರಿ ಮತ್ತೆ ದಾರಿ
ಹಿಡಿದೆಲ್ಲಿಗೊ ನಡೆವನು ;
ಅಂತೆ ನಿನ್ನ ಆಗಮವಿರೆ
ಹಿರಿಮೆ ನಿನ್ನದೇನು ?

೪

ಕುರುಡಗೆರಡು ನಿಮಿಷ ಕಣ್ಣ
ನೋಟಗಳನೆ ನೀಡಿ,
ಧರೆಯ ಚೆನ್ನ ಸೊಬಗಿನನ್ನ-
ವ್ರೂಡುವಂತೆ ಮಾಡಿ,
ಮರಳಿ ಕಣ್ಣ ಕಳೆದೊಡವಗೆ
ಇರುವುದೇನು ಬರಿ ತಗುಬಗೆ !

——— ನಲವತ್ತಾರು ———

ವರುಷಕೊಂದು ಬಾರಿ ಬಂದು
ಬೆಳಕಗರೆವೆ ನೀನು....
ಉಳಿದ ಇರುಳ ತಮಸಿನುರುಳ
ಕಳೆಯೆ ದಾರಿಯೇನು ?

* * *

ಬೆಳಕನೆರಚು, ಬೆಳಕನೆರಚು,
ಯುಗ-ಯುಗವನು ಬೆಳಗಿಸು,
ಇಳೆಯ ಕವಿವ ಕತ್ತಲೆಗಳ
ಕಳೆದೇಗಲು ತೊಳಗಿಸು !

★ ★ ★

ಹಾಳು ಪಟ್ಟಣದ ಬಂಡೆಯ ಬಳಗದ
ಕೊರಗಿನ ಮೌನದ ಕೂಗನು ಕೇಳಿ!

೧

“ ಹೇಳಲಿಕಾಗದ ಕಾಲದಿಂದಲೂ
ತಾಳಿ ಗಾಳಿ-ಮಳೆ ಚಳಿ-ಬಿರುಬಿಸಿಲು
ಸೊಗಸೇನನೊ ಬದುಕಿಗೆ ಬಯಸಿದೆವು,
ಹಗಲಿರುಳೂ ತಪದೊಳು ಬಳಲಿದೆವು....
ಆದರು ನಮಗಿಹ ಹೆಸರೇನು?
ಬಂಡೆಯೆ ಅಲ್ಲವೆ? ಬೇರೇನು?”

೨

“ ನಿಂದೆಡೆಯೊಳೆ ಅಲುಗಾಡದೆ ನಿಂದು
ಒಂದೆ ಮನದಿ ಮಾಡಿದ ತಪವಿಂದು
ನಮಗೇತಕೆ ಕೊಡದಿರುವುದೊ ಫಲವ!
ಕೇಳುವೆವಾರಲಿ ನೆರವಿನ ಬಲವ?
ನಮಗಿಹ ‘ಬಂಡೆ’ಯ ಹೆಸರನ್ನು
ತವಿಸುವರಾರೂ ಬರರೇನು?”

೩

“ ನಮ್ಮೊಡನೆಯೆ ನೆಲದೊಳು ಮೂಡಿದುವು,
ನಮ್ಮೊಂದಿಗೆ ತಪದೊಳು ಕೂಡಿದುವು,
ಎನಿತೆನಿತೋ ಘನತೆಯ ಪದವೊಂದಿ
ಜನದಲಿ ಹೊಸ ಹೊಸ ಹೆಸರನು ಹೊಂದಿ,
ಹೆಮ್ಮೆಯ ಕೀರ್ತಿಯ ಗಳಿಸಿದುವು
ನಮ್ಮಯ ಕುಲಬಂಧುಗಳೆ ಅವು!

೪

" ಹಂಪೆಯಧೀಶನ ಶ್ರೀಶಿವಲಿಂಗ !
ವಿಜಯನಗರ ಕೋಟೆಯ ಅಂಗಾಂಗ !
ಅರಮನೆ ಸಿರಿಮನೆ ಗಜ-ತುರಗಾಲಯ !
ಅರಸಿಯರಂತಃಪುರ ಗುರುನಿಲಯ !
ಹೆಸರಿಂತೆನಿತನೊ ಪಡೆದಿಹವು—
ನಮ್ಮಯ ಕುಲಬಂಧುಗಳೆ ಅವು !

೫

" ದೊರೆಗಳ ಶಾಸನವೊರೆಯುವುವೆನಿತೋ
ಗರತಿಯ ಬದುಕನು ಮೊರೆಯುವುವೆನಿತೋ !
ವೀರರ ಬಲುಹನು ಹಾಡುತಲೆನಿತೊ, ಉ-
ದಾರರ ಚಾಗವನಾಡುತಲೆನಿತೋ—
ಹೆಮ್ಮೆಯ ಹೆಸರನು ತಳೆದಿಹವು—
ನಮ್ಮಯ ಬಳಿಯಿದ್ದುವಲೆ ಅವು ?

೬

" ವಿಜಯ ವಿಟ್ಠಲನ ಚಿತ್ರದ ತೇರು !
ಗುಡಿ ಗೋಪುರ ಮಂಟಪಗಳ ಕುಸುರು !
ಎನಿತು ಕಲಾಕೃತಿ ಅನಿತಕು ಹೆಸರು,
ನಮಗೇನಿರುವುದು ಬರಿ ಬಿಸಿಯುಸಿರು !
ಕೆಲವೆ ಕಾಲ ಬಾಳಿದರು ಅವು—
ಹೆಮ್ಮೆಯ ಹೆಸರನು ಬೆಳಗಿದುವು !

೭

" ಬಲ್ಲಿದರಾರೋ ಬಂದಿಲ್ಲಿಳಿಯುತ
ಇಲ್ಲಿಹ ನಮ್ಮವರನು ಎಚ್ಚರಿಸುತ

ಒಳ್ಳೆಯ ಒಳ್ಳೆಯ ರೂಪವ ಕೊಡಿಸಿ,
ಬಂಡೆಯೆಂಬ ಬರಿ ಹೆಸರನು ಬಿಡಿಸಿ,
ಮನ್ನಣೆಯೊಲವನು ಸಲಿಸಿದರು—
ಧನ್ಯರೆಲ್ಲಿ ಅವರಡಗಿದರು ?

೮

" ಬರುವರೆ .. ಬರಲಿರುವರೆ.... ಯಾರಾದರು
ಮರಳಿ ರಾಜ್ಯವನು ಕಟ್ಟುವರೆ ?
ಅರಮನೆ-ಗುಡಿಗಳಿಗಿರದಿರೆ ಹೋಗಲಿ
ಸೆರೆಮನೆಗಾದರು ನಮ್ಮನು ಬಳಸಲಿ !
ಬರಲಿರುವರು ಬೇಗನೆ ಬರಲಿ—
ನಮಗೂ ಹೆಸರೊಂದನು ತರಲಿ !

* * *

ಹಾಳುಪಟ್ಟಣದ ಬಂಡೆಯ ಬಳಗದ
ಗೋಳಿನ ಮೌನದ ಕೂಗನು ಕೇಳಿ !

★ ★ ★

೧

ಮನವು ನಿನಗಾಗಿಯೇ ಮೊರೆಯುತಿದೆಯೇ—ಚಿನ್ನ
ನೆನಹು ನಿಡುಸುಯಿಲುಗಳ ಕರೆಯುತಿದೆಯೆ !
ಕನಸು ನಿನ್ನದೆ ಚಿತ್ರ ಬರೆಯುತಿದೆಯೇ—ನಿನ್ನ
ಇನಿದುದನಿ ಕಿವಿಗಳನು ಕೊರೆಯುತಿದೆಯೆ !

೨

ತೆಳುದುಟಿಯ ತಿಳಿಜೊಲ್ಲು, ಬಿಳಿಯ ಮೊಳೆವಲ್ಲು – ಆ
ಎಳಗಲ್ಲಗಳ ಜೆಲ್ಲು, ಮೆಲುನಗೆಯ ಸೊಲ್ಲು,
ಎಳಯುತ್ತಲಿಹವು ನನ್ನೊಳಗ ನಿನ್ನೊಡನೆಯೇ
ಎಳಗೂಸೆ, ನಿನ್ನೆದುರು ನನ್ನ ಬಲ ಹುಲ್ಲು !

೩

ಕೆಳೆಯ ಬಳ್ಳಿಯ ಮೊಳೆಯು ನೀನೆಂದು ಇದ್ದೆ—ಕಂ-
ಮಲರು ತನಿವಣ್ಣುಗಳ ಬೆಳೆವೆನೆಂದಿದ್ದೆ.
ಅಳಿಯಾಸೆಯಲಿ ಕಾಲ ಸೆಳೆದೊಯ್ಯೆ ತನಗೆಂದು
ಅಳಿದು ಕೆಳೆಯಾಶೆ ನಾ ಕಳವಳದಿ ಬಿದ್ದೆ !

೪

ಸಾಕಾಯಿತೇನೆ ಸವಿಸವಿಯ ಕೂಳು—ನಿನಗೆ
ಬೇಕಾಯಿತೇನೆ ಕಣ್ಣೀರ ಕಾಳು !
ಸಕ್ಕರೆಯ ತನಿವಾಲನೊಕ್ಕರಿಸಿ ಸವುಳುಪ್ಪ-
ನಿಕ್ಕಿರುವ ನೀರ ಬಯಸುವರೆ ಹೇಳು !

೫

ಆಗಸದ ತೊಟ್ಟಿಲಲಿ ತೂಗಾಡಲೆಂದು—ನೀ
ಹೋಗಿರುವೆಯೆನುತ ಬಗೆ ಹೇಳುತಿಹುದು ;
ತೂಗುದೊಟ್ಟಿಲ ಹಗ್ಗವಾಗಬೇಕೆಂದು—ತಾ-
ನೇಗಲೂ ಕರುಳು ಹುರಿಗೊಳ್ಳುತಿಹುದು.

೬

ಎಂದಿನಂದದ ನಗೆಯ ಚೆಂದಮೊಗದಿಂದ—ನೀ
ಬಂದು ಕುಳಿತಿರಲು ತೊಡೆಯಲ್ಲಿ ಕಂದ !
ಒಂದೆ ಸವಿಮುತ್ತಿಡುವೆನೆಂದಿರಲು ಎಚ್ಚತ್ತು
ಕಂದೆರೆಯಲರಿತೆ ಹಾಳ್‌ಗನಸಿನಂದ !

೭

ಎನಿತೊ ಮುತ್ತಿಟ್ಟಿದ್ದೆ, ನಲಿವ ಪಟ್ಟಿದ್ದೆ—ಮೈ-
ಮನಗಳನು ತಣಿವಿನಲಿ ತೇಲಬಿಟ್ಟಿದ್ದೆ ;
ಕನಸಿನೀ ಮುತ್ತಿನಾ ಗುಣವೇನೊ ! ಎದ್ದಾಗ
ಮನಸು ಮೈ ಮುಳ್‌ಬಲೆಗೆ ಬಿದ್ದಹಾಗಿದ್ದೆ.

೮

ಸಂತೆ ಬಯಲಾದಂತೆ ಹೃದಯ ಹಾಳು !—ಹೆರರ
ಸಂತಸದ ಸುಗ್ಗಿಯದು ನನಗೆ ಬೀಳು !
ತಂತಿ ಕಿತ್ತಿಹ ವೀಣೆಯಂತೆ ಬಾಳು—ಇದರ
ಅಂತವೆಲ್ಲಿದೆ ಮುಗುವೆ ಹೇಳು, ಹೇಳು !

★ ★ ★

( ಸರ್ವಜ್ಞ ಮೂರ್ತಿಯ ಸ್ವರೂಪದರ್ಶನಕಾರನನ್ನು ಕುರಿತು )

ಯಾರ ಅಭಿಶಾಪವೋ ಸರ್ವಜ್ಞಮೂರುತಿಗೆ!
ಅಮರನಲ್ಲವೆ—ಪುಷ್ಪದತ್ತ ಗಂಧರ್ವನವ?

ಕರದಿ ಕಪ್ಪರ ಹಿಡಿದು ಹಿರಿದಾದ ನಾಡಿನಲಿ
ತಿರಿದು ತಿನ್ನುತ, ತನ್ನ ಕಿರಿದುನಾಳ್ನುಡಿಗಳಲಿ
ಹಿರಿಯ ಹುರುಳನು ತುಂಬಿ ಜನಮನಕೆ ತಿನ್ನಿಸುತ,
ಕನ್ನಡದ ಮಲೆನಾಡ—ಕನ್ನಡ ಬಯಲ್ನಾಡ—
ಮೂಡು-ಪಡುವಲು-ಬಡಗ-ತೆಂಕಣವನಲೆದಾಡಿ,
ಕನ್ನಡಿಗರೆಲ್ಲರನು ಕಂಡಿದ್ದರ್; ಆ ಕವಿಯ
ಕನ್ನಡಿಗರೆಲ್ಲ ಕಣ್ಣಾರೆ ಕಂಡಿರ್ದರು.

ಆ ಕವಿಯ ನಗೆನುಡಿಯ ಕೇಳಿ ನಕ್ಕಿರ್ದ್ದರು;
ಆತನಾ ಕಿಡಿನುಡಿಗೆ ನಡುಕ ಪಡೆದಿರ್ದ್ದರು.
ಅವನ ಬೆಡಗನು ಕೇಳಿ ಬೆರಗುವಟ್ಟಿರ್ದ್ದರು;
ಅವನ ಜೋಯಿಸ ಕೇಳಿ ಸೊಬಗನಾಂತಿರ್ದ್ದರು
ಅವನ ವೈದ್ಯಕದಿಂದ ಬೇನೆಯನು ನೀಗಿರ್ದ್ದ-
ರವನ ರಸವೈದ್ಯದಲಿ ಕಲ್ಲು-ಕಬ್ಬಿಣವನೂ
ಕಾಂಚನವನಾಗಿ ಮಾಡುವ ಬಗೆಯಲಿರ್ದ್ದರು.
ಭವ್ಯ ದೇಹದ ಬ್ರಹ್ಮಚಾರಿ ಸರ್ವಜ್ಞನನು
ಬಲ್ಲದವರಿರಲಿಲ್ಲ ನಾಡಿನೊಳು....ಆದರೆ—
ಯಾರ ಶಾಪವೊ ಏನೊ, ಆ ಅಮರ ಕವಿಗೆ!
ಒಮ್ಮೆಲೇ ಅವನ ಮೈ ಅಳಿದು ಹೋಯಿತು; ಕೆಚ್ಚು-
ಗಟ್ಟಿರ್ದ್ದ ಅವನೊಡಲು ನುಚ್ಚುನೂರಾಯಿತು!
ಆ ಊರಲೊಂದು ಚೂರ್, ಈ ಊರಲೊಂದು ಚೂರ್;
ಹಳ್ಳಿಗೊಂದೊಂದು ಚೂರ್, ಹಟ್ಟಿಗೊಂದೊಂದು ಚೂರ್;

ಹೊಲೆಯರಲಿ ತುಣುಕೊಂದು, ಹಾರುವರಲಿನ್ನೊಂದು,
ಕುರುಬ-ಕುಂಬರ-ಜೇಡ-ಕಮ್ಮಾರರಲೊಂದೊಂದು;
ಒಕ್ಕಲಿಗರಲ್ಲಿ, ಆ ಲೆಕ್ಕಿಗರ ಮನೆಯಲ್ಲಿ—
ಮಕ್ಕಳಾಟಕೆ ಸಿಕ್ಕಿ ದಿಕ್ಕು ದಿಕ್ಕಿಗೆ ಚೂರು
ಸಿಕ್ಕಿದೊಲು ಚೆದರಿ ಸರ್ವಜ್ಞಮೂರ್ತಿಯ ಮೂರ್ತಿ
ಕಾಣದಂತಾಗಿತ್ತು ಕನ್ನಡದ ನಾಡಿನಲಿ.

ಯಾರ ಶಾಪವೊ ಕಾಣೆ, ಆ ಅಮೃತ ಮೂರುತಿಗೆ!
ಮೂರ್ತಿ ಅಳಿದರೆಯು ಆತನ ಕೀರ್ತಿ ನಾಡಿನಲಿ
ಸುಳಿದಾಡುತಿತ್ತು; ಸರ್ವಜ್ಞನಾ ಸವಿಹೆಸರು
ಕನ್ನಡದ ಬಾಯಿ-ಕಿವಿಗಳಲಿ ಮನೆ ಮಾಡಿತ್ತು.
ಅಮರಕವಿ ಸರ್ವಜ್ಞ ಶಾಪಕ್ಕೆ ಸಾಯುವನೆ?
ಶಾಪಮೋಚನ ಕಾಲ ಸಂದುಬಂದಿತು; ಕಾಲ
ತಾನೆ ಮಾಡುವನೇನು ತನ್ನ ಕಜ್ಜವನೆಲ್ಲ?
ಯಾವುದೋ ಹಿರಿಯ ಜೀವವನೊಂದ ಕರೆಯುವನು;
ಅದರ ಉಸಿರಲಿ ತನ್ನ ಉಸಿರನ್ನು ಊದುವನು.
ತನ್ನ ಕಜ್ಜವನೆಲ್ಲ ಮಾಡಿಸುವನದರಿಂದ.
ಆ ಜೀವವನೆ 'ಮಹಾಪುರುಷ' ಎನ್ನುತ ಲೋಕ
ಕೊಂಡಾಡಿ ಕೊನೆವಂತೆ ಮಾಡುತಿಹನಾತ.

ಸರ್ವಜ್ಞನಾ ನುಚ್ಚುನೂರಾದ ಕಾಯವನು
ಮರಳಿ ಸಂಧಿಸಿ ಮೂರ್ತಿಯನ್ನು ನಿರ್ಮಿಸಲೆಂದು
ಕಾಲನಾರಿಸಿದ ಕನ್ನಡದೊಂದು ಹಿರಿಜೀವ
ದಿಕ್ಕು-ದಿಕ್ಕಿಗೆ ಚೆದರಿಬಿದ್ದಿರ್ದ ಕವಿರಾಯ-
ನಾ ಮೈಯ ನುಚ್ಚುನೂರುಗಳನೊಗ್ಗೂಡಿಸುತ,
ತನ್ನ ಹಿರಿಮೆಯ ತಪದ ಸಂಜೀವಶಕ್ತಿಯಲಿ

ಸರ್ವಜ್ಞಕವಿಗೆ ಉಸಿರನ್ನಿತ್ತಿತಾ ಜೀವ.
ಮೆಯ್ಯಳಿದ ಕವಿ ಮತ್ತೆ ಮೆಯ್ಯಾಂತು ನಿಲ್ಲುವಂ-
ದದಿ ಮಾಡಿತಾ ಹಿರಿಯ ಜೀವ; ಈ ದಿನ ಮತ್ತೆ
ಸರ್ವಜ್ಞ ಮರಳಿ ಮಾತಾಡುತಿಹ ಮೈಗೊಂಡು.

ಕನ್ನಡಕೆ ಸರ್ವಜ್ಞಕವಿಯನೊದವಿಸಿಕೊಟ್ಟ
ಹಿರಿಜೀವ ಕನ್ನಡದ ಸೌಭಾಗ್ಯವದು ಸತ್ಯ!
ಕಾಲನೇ ಒಪ್ಪಿರಲು ಅದರ ಹಿರಿಮೆಯನಿನ್ನು
ಕನ್ನಡರು ಒಪ್ಪದೇನಿರುವರೇ? ಆ ಜೀವ
ಕನ್ನಡದ ನಾಡಿನಲಿ ಬಹುಕಾಲ ಬಾಳಲಿ!
ಆಳಾದ ಕನ್ನಡವು ಅರಸಾಗಿ ಬಾಳ್ವುದನು
ಕಣ್ಣಾರೆ ಕಂಡು ಸುಖ-ಶಾಂತಿಯನು ತಾಳಲಿ!



ಗುಡಿಯಲ್ಲಿ ನಡೆದಿರ್ದ್ದ ಪೂಜೆಯೈಸಿರಿಯಿಂದು
ಮರೆಯಾಗಿದೆ—ಎಲ್ಲ—ಮರೆಯಾಗಿದೆ!

೧

ಅಳತೆಯಿರದನಿತು ದೀವಿಗೆಯೋಳಿ ತೊಳತೊಳಗ್ಗಿ,
ಬೆಳಗಿಸಿದುವಂದು ದೇವಿಯು ವರದ ಮೂರುತಿಯ ;
ಕಳೆದುಕೊಂಡಿಂದು ತಿಳಿನೇಯುವನು ದೀವಿಗೆಗ-
ಳಳಿದು ಕರ್ಗತ್ತಲೆಯು ಕವಿದು ಮುಸುಕಿದೆ ಗುಡಿಯ.
ದೇವಿಯಾ ವರದಮೂರುತಿ ಕಾಣದಿಹುದು ;
ಭಾವುಕರ ಬಳಗವದು ಬೆದರಿ ಚೆದರಿಹುದು!

೨

ಅರಳುಗಳ ಕರ್ಪುರಾರತಿಯು ಧೂಪದ ಕಂಪು
ಬೆರೆತು ಸುಳಿಗಾಳಿಯೊಳು ಹರಿದು, ದೂರದ ಜನರ
ಕರೆದೊಯ್ಯುತಿರಲಿಲ್ಲವೇ ಬಳಿಗೆ? ಇಂದೇನು?
ಸರಿದಿರುವ ಸೊಡರುಗಳ ಸೊವಡುಗಂಪದು ಹರಡಿ,
ಹೊರ-ಹೊರಟು ಮೂಗುಸೆಲೆ ಕೊರೆಯುತಿಹುದು,
ನೆರೆಯುವರನೂ ದೂರ ಸರಿಸುತಿಹುದು!

೩

ಅಂದಿನಾ ಪೂಜೆಯುವಸರದ ಮಂತ್ರಗಳೇನು!
ಒಂದೆ ದನಿಯೊಳಿ ಮೊರೆವ ಭಾವಗೀತಗಳೇನು!
ದುಂದುಭಿಯ ಡೋಳು—ಜಾಗಟೆಗಳಬ್ಬರವೇನು!
ಇಂದದೊಂದೂ ಇಲ್ಲ, ಎಲ್ಲೆಲ್ಲಿಯೂ ಮೌನ!
ನುಡಿಯುತಿಹ ಹಲ್ಲಿಗಳ ಲೊಟಲೊಟೆಂಬುಲುಹು,
ಅಡಿಗಡಿಗೆ ಮೌನತೆಯು ಸೀಳಿ ಹೊರಡುವುವು!

೪

ಹಾಲಕ್ಕಿಯೊಂದು ಹುಮ್ಮಸದಿ ಕಿಲಬಿಲಿಸುತಿದೆ ;
ಮೂಳನಾಯೊಂದು ಮನಬಂದಂತೆ ಬೊಗಳುತ್ತಿದೆ ;
ಕೇಳುತಿದೆ ಅತ್ತಿತ್ತ ನರಿಗಳೂಳಾಟ; ಬಿರು-
ಗಾಳಿ ಬಿರು-ಬಿರ್ರೆಂದು ಮೊರೆಮೊರೆದು ಬೀಸುತಿದೆ!
ಪೂಜೆಯವಸರದ ಮಂತ್ರಸ್ವನಗಳಿಲ್ಲ....
ಓಜೆಯಲಿ ಮೆರೆವ ವಾದ್ಯಧ್ವನಿಗಳಿಲ್ಲ !

೫

ಓ! ಅರಿದಿದೇನಿದು ? ... ದೇವಿಯಿರುವ ದೆಸೆಯಿಂದಿತ್ತ
ಬರುವ ಗಾಳಿಯೊಳು ಬೆರೆತಿರುವ ಬಿಸಿಯುಸಿರೇನು ?
ಬಿಸಿಯುಸಿರ ಬೆಂಬಳಿಸಿ ಬರುವ ದನಿ ಯಾರದಿದು ?
ಬರಿಯೆ ದನಿಯಲ್ಲ ; ಹುರುಳಿನ ನುಡಿಯ ಕೂಡಿಹುದು !
ಗಾಳಿ ತರುತಿಹ ನುಡಿಯಿದೇನೆಂಬಿರೇನು ?
ಕೇಳಿ-ಕೇಳಿರಿ, ನಸುವೆ ಕೊಟ್ಟು ಕಿವಿಗಳನು !

೬

" ನಿತ್ಯಪೂಜೆಯು ಬೇಕು ! ನಿತ್ಯಪೂಜೆಯು ನನಗೆ !
ಕುತ್ತಗಳ ಕಳೆದುಕೊಳುವಾಶೆಯಲ್ಲವೆ ನಿಮಗೆ ?
ನಿತ್ಯ ಪೂಜಿಸಲು ಜೇಸತ್ತರಾಗುವುದೇನು ?
ನಿತ್ಯಪೂಜೆಯು ಬೇಕು; ನಿತ್ಯಪೂಜ್ಯಳು ನಾನು !
ಕತ್ತಲೆಗೆ ಹೆದರದಿರಿ ಕಾಲಿಡಿಂ ಮುಂದೆ,
ಒತ್ತರದಿ ಬನ್ನಿರೆಲ್ಲರು ಇಲ್ಲಿಗಿಂದೆ !
ಮರ-ಮರಳಿ ಸಲ್ಲಿಸಿರಿ ವೀರಪೂಜೆಯನೆನಗೆ,
ವರವಾವುದನು ಕೇಳಿ ಕೊಡುವೆ ನಾ ನಿಮಗೆ ! "

ಹೊಸಕಾಲದ ಕವಿಯೊಬ್ಬನೆ ನಾನು!
ಹೊಸೆಯುವೆನೆಂತಹ ಕವನಗಳನ್ನು!

೧

ಪ್ರತಿಭಾದೇವಿಯ ದಯೆ ಬೇಕಿಲ್ಲ;
ಅವಳಿಗೆ ಮಣಿಯುವ ಕವಿ ನಾನಲ್ಲ!
ಎಡಗೈಯಲಿ ನಿಂತಿಹಳಾ ಹುಡುಗಿ,
ನನ್ನ ನೋಡಿದರೆ ಅವಳಿದೆ ನಡುಗಿ—
ಚಳಿಯುರಿಯಲಿ ಗದಗುಟ್ಟುವಳು;
ಉಳಿದವರಿಗೆ ದೊಡ್ಡವಳವಳು!

೨

ಮಳೆಗಾಲದ ಕಾಲುವೆನೀರಂತೆ
ಗಾಯಗೊಂಡ ಮೈನೆತ್ತರಿನಂತೆ
ಹಿಂಗದೆ ಹರಿವುದು ನನ್ನಯ ಭಾವ;
ತಳಮಳಗೊಳಿಪುದು ರಸಿಕರ ಜೀವ—
ಬತ್ತಲೆ ಹೆಣ್ಣಿನ ಚೆಲುವಿನೊಲು,
ನನ್ನ ಬಿಚ್ಚುನುಡಿಗಳ ಹುರುಳು!

೩

ಕಾವ್ಯೋನ್ಮಾದವು ಮೆದುಳಲಿ ಸೇರಿ,
ಫೌಂಟನ್‌ಪೆನ್ನಿನ ಕುದುರೆಯನೇರಿ,
ಸುತ್ತಿಬರುವೆ ನಾ ಸೃಷ್ಟಿಯ ತುಂಬ;
ದಣಿದ ಕುದುರೆಯಾ ಬಾಯ್‌ನೊರೆಯೆಂಬಾ
ಪೆನ್ನಿನ ಮಸಿ ಎಲ್ಲೆಡೆ ಸುರಿದು,
ವಿಶ್ವವನೇ ಮಾಡಿತು ಕರಿದು.

೪

ನನ್ನ ಕವನಗಳ ತೆಗಳುವರಲ್ಲವೆ ?
ನನ್ನ ಕವನಗಳ ಹೊಗಳುವರಿಲ್ಲವೆ ?
ತೆಗಳ್ವವರಿಗೆ ಕಾಲ್ ಚೆಪ್ಪಲಿಯೇಟು !
ಹೊಗಳ್ವವರಿಗೆ ಮೆಚ್ಚಿನ್ನಯ ಹ್ಯಾಟು !
ಬನ್ನಿರಿಲ್ಲಿ ಬನ್ನಿರಿ ಮುಂದೆ ;
ತೆಗಳುವ ಗಂಡೆದೆ ಯಾರಿಗಿದೆ ?

* * *

ಹೊಸಕಾಲದ ಕವಿಯೊಬ್ಬನೆ ನಾನು !
ಹೊಸೆದೊಗೆವೆನು ನೂರ್ ಕವಿತೆಗಳನ್ನು !

★ ★ ★

( ಕಾಳನ ಕೋರಿಕೆ )

ಕಾಳನು ಏಳೆಂಟು ವರುಷದ ಹುಡುಗ,
ಕಾಳಿಯ ಗುಡಿಗೊಂದು ದಿವಸ ಹೋದಾಗ—
ತೋಳೆತ್ತಿ ಕೈಮುಗಿದು ಕಣ್ಮುಚ್ಚಿ ನಿಂತು
ಕಾಳೀದೇವಿಗೆ ಬೇಡಿಕೊಂಡನು ಇಂತು : ೧

ಅಮ್ಮಮ್ಮಾ ನಮ್ಮೂರು ಬಲು ದೊಡ್ಡದಮ್ಮಾ !
ನಮ್ಮೂರಲಿಹ ಜನ ಕಮ್ಮಿ ಇಲ್ಲಮ್ಮಾ !
ಎರಡು ಲಕ್ಷದ ಮೇಲೆ ಇನ್ನೆಷ್ಟೋ ಸಾವಿರ
ಇರುವರು—ಎಂದು ನಾನರಿತಿಹೆನಮ್ಮಾ ! ೨

ದಿನ ದಿನ ಬೆಳಗು-ಸಂಜೆಯೊಳು ಅವರಿಗೆಲ್ಲಾ
ಕುಡಿಯಲು ಬಿಸಿ ಬಿಸಿ ಕಾಫೀ ಬೇಕಮ್ಮಾ !
ಅವರೆಲ್ಲಾ ಕುಡಿಯುವ ಕಾಫಿಯ ಲೆಕ್ಕವ
ವಿವರಿಸಿ ಹೇಳುವೆ, ಕೇಳು ನಮ್ಮಮ್ಮಾ ! ೩

ಅಬ್ಬಬ್ಬಾ ! ತೀರ ಕಡಿಮೆಯಾಗಿ ಹಿಡಿದರೂ
ಒಬ್ಬೊಬ್ಬರಿಗೆ ಲೋಟಾ ಎರಡು ಬೇಡೇನೆ ?
ನಾಲ್ಕು ಲೋಟಕೆ ಕಿಟ್ಟಲಿ ತುಂಬುವುದು ಹದಿ-
ನಾಲ್ಕು ಕಿಟ್ಟಲಿಗೊಂದು ಕೊಡ ತುಂಬದೇನೆ ? ೪

ನೂರುಮಂದಿಗೆ ನಾಲ್ಕು ಕೊಡವಾಗುವುದು; ಹತ್ತು-
ನೂರುಮಂದಿಗೆ ನಲವತ್ತು ಆಗುವುದು ;
ಲಕ್ಷ ಮಂದಿಗೆ ನಾಲ್ಕು ಸಾವಿರ ಕೊಡ ಕಾಫೀ
ಲೆಕ್ಕವಾಯಿತೆ—ನಮಗೆಷ್ಟು ಬೇಕೆಂದು ? ೫

ನಮ್ಮೂರ ಜನಕೆಂಟು ಸಾವಿರಕೂ ಹೆಚ್ಚು
ಕಮ್ಮನೆಯಾ ಕಾಫೀ ಕೊಡಗಳು ಬೇಕಮ್ಮಾ !
ಒಂದೊಂದೇ ದಿನಕಿಷ್ಟು ಕೊಡಗಳು ಬೇಕಿರೆ,
ಒಂದು ವರುಷಕೆಷ್ಟು ಲೆಕ್ಕ ನೋಡಮ್ಮಾ ! ೬

ಇಂದು ಈ ಲೆಕ್ಕವ ನಾ ಮಾಡಲರಿಯೆನೆ,
ಮುಂದಿನ ವರುಷಕೆ ಮಾಡಿ ಹೇಳುವೆನು !
ಇಂತಹ ಲೆಕ್ಕವ ಮಾಸ್ತರ್ರು ನಮಗಿನ್ನೂ
ಕಲಿಸಿಯೆ ಕೊಟ್ಟಿಲ್ಲ ನಾ ಮಾಡಲೇನು ? ೭

ಆದರು ನಾ ಸುಮಾರಾಗಿ ಹೇಳುವೆನು –
ನಮ್ಮೂರ ವರುಷದ ಕಾಫೀ ಲೆಕ್ಕವನು ;
ವರುಷದ ಕಾಫಿಯು ಸೇರಿ ಕೆಂಪಾಂಬುಧಿ-
ಕೆರೆಯಂಥಾ ಕೆರೆ ತುಂಬುವುದು ತಿಳಿ ನೀನು ! ೮

ಕೆರೆತುಂಬಾ ಕಾಫಿಯ ಕಾಸಬೇಕಾದರೆ,
ವರುಷವೆಲ್ಲವು ಎಷ್ಟು ಶ್ರಮ ನಮಗಮ್ಮಾ !
ಇರುವೆ ನೀ ಸುಮ್ಮನೆ, ಕರುಣೆಯು ಬರದೇನೆ ?
ಹರಿಸು ನಮ್ಮಗಳ ಈ ಕೊರತೆಯನಮ್ಮಾ ! ೯

ಇನ್ನೇನ ಬೇಡೆನು, ನಿನ್ನನು ಕಾಡೆನು,
ನನ್ನದಿದೊಂದೇ ಕೋರಿಕೆಯು ಕೇಳಮ್ಮಾ !
ಆಪತ್ತು ಬರದಂತೆ ನಮ್ಮೂರ ಜನಕೆಲ್ಲಾ
ಕಾಫೀಯ ಕೆರೆಯೊಂದ ಕೊಡು ನೀ ಕಾಳಮ್ಮಾ ! ೧೦

ದೋಸೆಯ ಬೆಟ್ಟವೊಂದಿದ್ದರೂ ಬೇಕು,
ಇಲ್ಲದಿದ್ದರೆ ಕಾಫೀ ಕೆರೆಯೊಂದೇ ಸಾಕು !

——— ಅರುವತ್ತೊಂದು ———

ಕುಣಿ ಕುಣಿ ಹಣವೇ ಝುಣಾಝುಣಾ !
ಮಾಡುವೆ ಹಬ್ಬಾ ದಿನಾದಿನಾ !

ಝಿಲ್‌ಝಿಲ್ ಥಕ್‌ಥಕ್ ಥೈ !....
ಬಿಲ್ಲಿಗೆ ಮೂರೇ ಪೈ !

ರಾಣಿಯ ಕಾಲಿಗೆ ಪಿಲ್ಲಿ....
ಆಣೆಗೆ ನಾಲುಕು ಬಿಲ್ಲಿ !

ನವಿಲಿನ ಕುಣಿತವು ಕಾಣೇ....
ಚವಲಿಗೆ ಎರಡೇ ಆಣೆ !

ಭಾವ ಬಂದರೆ ಗವಲಿ....
ಪಾವಲಿಗೆರಡು ಚವಲಿ !

ಕುಂಟನ ಕಿವಿಗೆ ಬಾವ್ಲಿ....
ಎಂಟಾಣೆಗೆರಡು ಪಾವ್ಲಿ !

ಸಿಪಾಯಿ ಕತ್ತಿಗೆ ಸಾಣೆ....
ರುಪಾಯಿಗೆರಡೆಂಟಾಣೆ !

ರುಪಾಯಿಯಿದ್ದರೆ ಹೊಟ್ಟೆ....
ರುಪಾಯಿಯಿದ್ದರೆ ಬಟ್ಟೆ !

ರುಪಾಯಿಯಿಂದಲೆ ಆಟ....
ರುಪಾಯಿಯಿಂದಲೆ ನೋಟ !

ಕುಣಿದರೆ ಹಣವು ಝುಣಾಝುಣಾ !
ಮನೆಯಲಿ ಹಬ್ಬವು ದಿನಾದಿನಾ !



೧

ಸೆಟ್ಟಿಯ ಮನೆ ಸುಲಿಗೆಯಾಯ್ತು,
ಮನೆಯಲಿದ್ದುದೆಲ್ಲ ಹೋಯ್ತು,
ಬಡಿದುಕೊಂಡು ಅತ್ತು ಸೆಟ್ಟಿ
ಬಾಯ್ಗೆ ಡೊಳ್ಳಿಗೆ;
ನಡೆದನಂದೆ ನಗರ ಬಿಟ್ಟು
ತನ್ನ ಹಳ್ಳಿಗೆ.

೨

'ಬಸ್ಸು'ಗಳಲಿ ಅಂದು ಜಿದ್ದು;
ಸೆಟ್ಟಿ ಬರಲು ತಟ್ಟನೆದ್ದು
ಓಡಿ ಬಳಿಗೆ ಬಂದನೊಬ್ಬ
ಬಸ್ಸಿಜಂಟನು—
ಕಾಡಿ ಕಾಡಿ ಕೊನೆಗೆ ಸೆಳೆದ
ಕೈಯ ಗಂಟನು.

೩

ಐದಾಣೆಯ ದರವು ಗೊತ್ತು!
ಸೆಟ್ಟಿಯಂದು ಅರ್ಧ ತೆತ್ತು,
ಹತ್ತು ಬಿಲ್ಲಿ ಉಳಿದುವೆಂದು
ಹಿಗ್ಗಿ ತಳೆದನು;
ಕಳೆದ ಹಣದ ವ್ಯಥೆಯ ಗಳಿಗೆ
ಮರೆತೆ ಕುಳಿತನು.

★ ★ ★

೧

ಒಳ್ಳೆ ಬೆಳೆಗಳ ತಿಂದು ಪೊಳ್ಳು-ಜೊಳ್ಳಾಗಿಸುತ
ಬರಗಾಲ ತರುವುದಾ ಜಿಟ್ಟೆಯ ಹುಳ!
ಹಳ್ಳಿಗರ ಸಂತಸವ ಕೊಳ್ಳೆ ಹೊಡೆಯುತ್ತಿಹುದು,
ಕರಿಗಾಲಗುಣದ ಬಿಳಿಬಟ್ಟೆಯ ಹುಳ!

೨

ಇರುವನಿತೆ ಕಿರುಬೆಳಕ ಮೆರೆಯಿಸುತ ಮಿರುಗಿಸುತ
ಹಾರುವುದು ಮುಗಿಲೊಳಗೆ ಹೊನ್ನೆಯ ಹುಳ!
ಗರುವ-ಹೆಮ್ಮೆಗಳಿಂದ ಕೊರಲೊತ್ತಿ ಬಡವರನು
ತೂರುವುದು ಹುಡಿಯೊಳಗೆ ಹೊನ್ನಿನ ಹುಳ!

೩

ನೀರ-ಹರಿಯೊಳಗಿದ್ದು ಊರೊಳಗೆ ಚಳಿಯುರಿಯ
ಬೀರುವುದು ಹಾರಿ ಗುಂಗಾಡಿಯ ಹುಳ!
ಊರಿ ಬೆಂಕಿಯ ಕಿಡಿಯ, ಊರಿಗೂರನೆ ಸುಟ್ಟು
ಜಾರುವುದು ಕಿಡಿಗೇಡಿ ಚಾಡಿಯ ಹುಳ!

೪

ಹಸಿದು ಉಣುತಿರುವಾಗ ಬಿಸಿಯನ್ನದಲಿ ಕಂಡು
ಕಸಿವಿಸಿಯ ಪಡಿಸುವುದು ಬಾಲದ ಹುಳ!
ಕಸಿದುಕೊಳುವುದು ಬದುಕಿನೊಸಗೆಯನೆ ಹಗಲಿರುಳು
ಬಸಿರೊಳಗೆ ಕಚ್ಚುತಿಹ ಸಾಲದ ಹುಳ!

೫

ಉರಿವ ದೀಪವ ಬಡಿದು ಹರಡುವುದು ಕತ್ತಲೆಯ
ಪರಪೀಡಕವು ಪೂರ್ಣ ಪಕ್ಕದ ಹುಳ!
ಅರುಹಿನೊಳು ಬೆಳಕನ್ನು ಮರವೆಯಲಿ ಹೂಳುವುದು
ಕುರುಡುಧರ್ಮಾಚಾರ ಕೊಕ್ಕೆಯ ಹುಳ!

೬

ಮುದ್ದು-ಮುದ್ದೊಡವೆಗಳ ಮೆದ್ದು ಮಣ್ಮಾಡುವುವು
ಗುದ್ದಿನೊಳಗಡಗಿರುವ ಗೆದ್ದಲು ಹುಳ!
ಇದ್ದ ಬುದ್ಧಿಯ ಮಾರಿ ಮೊದ್ದುತನ ಕೊಳ್ಳುವುವು
ಕೋಣೆಯೊಳೆ ಕುಳಿತಿರುವ ಹೊತ್ತಗೆಹುಳ!

★ ★ ★

ಪ್ರಜಾರಾಜ್ಯ ಬಂತು ಬಂತು, ಸಕಲಪ್ರಜಾರಾಜ್ಯ !
ಪ್ರಜೆಗಳಿಗೇ ಇಲ್ಲಗೊತ್ತು : 'ಯಾರದು ಈ ರಾಜ್ಯ !'

೧

ಆಯ್ಕೆಯ ದಿನ ಬಂದಾಕ್ಷಣ ಸವಿಯ ಭಕ್ಷ್ಯ-ಭೋಜ್ಯ
ಪ್ರಜರ ಬಾಯ್ಗೆ ಬೀಳ್ವುದು ನಿಜ, ಅದಕೆ ಪ್ರಜಾರಾಜ್ಯ !
ಆಯ್ಕೆ ಮುಗಿದ ಮರುದಿನವೇ ಪ್ರಜೆಗಳೆಲ್ಲ ತ್ಯಾಜ್ಯ !
ಪ್ರಜರ ಬಾಳೆ ಆಳುವವರ ತೆರೆದ ಬಾಯ್ಗೆ ಭಾಜ್ಯ !

೨

ಲಂಚಮುಕ್ಕುವವರ ಉಕ್ಕು, ಪ್ರಜಾರಾಜ್ಯವೆ ?
ಕಳ್ಳಪೇಟೆಯವರ ಬೇಟೆ, ಪ್ರಜಾರಾಜ್ಯವೆ ?
ಮಾತೆ ಮಾತು, ಕೃತಿಗೆ ತೂತು ! ಸುಖವು ಸಾಧ್ಯವೆ ?
ಆದರು ಇದು ಪ್ರಜಾರಾಜ್ಯ ! ಅಹಹ, ಚೋದ್ಯವೆ !

೩

ತನ್ನ ನಂಟ ಮಾಡುವ ಅನ್ಯಾಯವೆಲ್ಲ ನ್ಯಾಯ !
ಇನ್ನೆಲ್ಲರು ಬಿಡಲು ಬೇಕು ನ್ಯಾಯಕಾಗಿ ಬಾಯ !
ಆಡಳಿತದ ಆಸನಕ್ಕೆ ಬೇರೆ ಯಾರು ಕೈಯ —
ಹಚ್ಚದೆಯೇ ದುಡಿಯಬೇಕು. ಪ್ರಜಾರಾಜ್ಯಧ್ಯೇಯ !

೪

ಭರತ ಭೂಮಿಯೆಲ್ಲ ಬಾಯಿಮಾತಿನಲ್ಲಿ ಒಂದೇ !
ಕೊರೆಯುತಿಹವು ಕಿವಿಗಳನ್ನು ಪರಸ್ಪರರ ನಿಂದೆ !
ಜಾತಿಜಗಳ, ನುಡಿ-ಗಡಿಗಳ ಜಗಳಗಳೇ ಮುಂದೆ,
ಜಗದೀಶಾ ನೀನೆ ಕಾಯೊ ಪ್ರಜಾರಾಜ್ಯ ತಂದೆ !

★ ★ ★

——— ಅರುವತ್ತಾರು ———

ಭಾರತಕ್ಕೆ ಬಂದಿತಂತೆ ಸ್ವಾತಂತ್ರ್ಯದ ಹುಣ್ಣಿವೆ,
ಕನ್ನಡಿಗರಿಗೇನಿದೆ, ಬರಿ ಕಂಬನಿಗಳ ಕಣ್ಣಿವೆ !

೧

ಈ ಹಬ್ಬದ ಬಯಕೆಯಿಂದ ನಾವು ದುಡಿದುದೆಷ್ಟು !
'ಹಬ್ಬ ಬಹುದು, ಬಹುದು !' ಎಂದು ಹಿಗ್ಗಿ ಮಿಡಿದುದೆಷ್ಟು !
ಆದರೇನು ? ಇಲ್ಲ ನಮಗೆ ಸುಖವು ಎಳ್ಳಿನಷ್ಟು—
ಭಾರತಕ್ಕೆ ಬಂದಿತಂತೆ ಸ್ವಾತಂತ್ರ್ಯದ ಹುಣ್ಣಿವೆ !

೨

ಗೆಳೆಯರೆಂದು ನಂಬಿದವರೆ ತಿಂಬ ಹುಲಿಗಳಾದರು ;
ಹುಲಿಗಳೆಂದು ಗುಡುಗಿದವರೆ ಬಿಲದ ಇಲಿಗಳಾದರು ;
ಬಲೆಗಳಲ್ಲಿ ಸಿಲುಕಿದ್ದರು ಬರಿದೆ ಗಳಹುತಿರುವರು—
ಭಾರತಕ್ಕೆ ಬಂದಿತಂತೆ ಸ್ವಾತಂತ್ರ್ಯದ ಹುಣ್ಣಿವೆ !

೩

ಹಬ್ಬದಲ್ಲಿ ಪಲ್ಲಕ್ಕಿಯ ಹೊರುವುದೆಮ್ಮ ಪಾಲು !
ಕೇಳುವವರು ಯಾರು ಇಲ್ಲ, ನೊಂದರೆಮ್ಮ ಕಾಲು !
ನಮಗೆ ಕರುಳ ಕುದಿತ, ಕುಡಿವುದಿನ್ನಾರೋ ಹಾಲು !
ಭಾರತಕ್ಕೆ ಬಂದಿತಂತೆ ಸ್ವಾತಂತ್ರ್ಯದ ಹುಣ್ಣಿವೆ !

೪

ಗುಡುಗು ಕೇಳಿ ಮಳೆಯಾಗಲೆ ಜಡಿವುದೆಂದೆವು ;
ನಮ್ಮ ಹೊಲವ ನಾವೆ ಬಿತ್ತಿ ಬೆಳೆವೆವೆಂದೆವು ;
ಬಂಜೆಗುಡುಗು, ಮಳೆಗೆ ಪಿಡುಗು, ಬರವೇ ಬರವು !
ಭಾರತಕ್ಕೆ ಬಂದಿತಂತೆ ಸ್ವಾತಂತ್ರ್ಯದ ಹುಣ್ಣಿವೆ !

ಭಾರತಕ್ಕೆ ಬಂದಿತಂತೆ ಸುಖ-ಶಾಂತಿಯ ಹುಣ್ಣಿವೆ—
ಕನ್ನಡಿಗರ ಮುಂದೆ ಮಾತ್ರ ಮುಳ್ಳು-ಕಲ್ಲು-ಮಣ್ಣಿವೆ.

( ಒಂದು ಅಣಕ )

೧

ಬಾ, ಬಾರ ಸಾಂತ್ರಿ, ಈ ಊರ ಸಂತಿ ಯಾ-
ವಾರವೇನೊ....ಅಂತಿ !
ಯಾ ವಾರವೇನು ? ಪ್ಯುಳ್ಯಾಗ ಜೇನು ತಲಿ-
ಯಾಗ ಹೇನು ಚಿಂತಿ !
ಬಡಿದೀತು ಭ್ರಾಂತಿ, ತಡಿದೀತು ತಂತಿ ಈ
ಪೊಡವಿ ಗುಂತಗುಂತಿ !
ಆಡುವದು ಸಾಕ, ಹಾಡೊಂದ ಬೇಕ, ಮಿಡಿ-
ಮಿಡಿಯ ಕರಳ ತಂತಿ !

೨

ಹಾಸ್ಯಾವ ಕುಂಬಳದ ಬಳ್ಳಿ, ನಿಂದು ಬಲು ತಳ್ಳಿ
ಹಚ್ಚಬ್ಯಾಡ ಕೊಳ್ಳಿ —
ಕುಂಬಳದ ಕಾಯಿ ಹುಂಬರಿಗು ತಾಯಿ ಹಂ-
ಬಲಿಸಬ್ಯಾಡ ಮಳ್ಳೀ !
ನೀ ಸುಳ್ಳಿ ತಿಂತಿದಿಯ ಹುಳ್ಳಿ ಹಸಿಯ ಈ-
ರುಳ್ಳಿ ಊರು ಹಳೆಹಳ್ಳಿ—
ನಿನ ಹಳ್ಳಿ ಸುತ್ತು ಬರಿ ಎಮ್ಮಿ-ಎತ್ತು, ಬೆಳ-
ದಿಽದ ಸಾಲುಗಳ್ಳಿ !

೩

ಸುಂದಿ ಸುಂದಿ ತಿರಗತಾವ ಹಂದಿ, ಎಲ್ಲ ತುರ-
ಮುಂದಿ ನಾಡಿನ್ಯಾಗ—
ತುರಮಂದಿಯೊಳಗ ತಾಯ್-ತಂದಿ ಹುಡಿಕಿದರ
ಸಿಗುವ ಬಗೀ ಹ್ಯಾಂಗ ?

ಅಂಗಡಿಯ ಮುಂದ ಗೊಂಗಡಿಯನೊಂದ ಜಂ-
ಗಮುಗ ನೀಡಿ ನಿಲ್ಲs—
ಎಲ್ಲಾರ ಕಿವಿಗೆ ಕೇಳಿಸಲಿ ಕವಿಗೆ ಆ-
ಗಸದ ರವಿಗೆ ಸೊಲ್ಲs !

೪

ಬಿದ್ದದ್ದು ಬೀಳು ಎದ್ದದ್ದು ಏಳು, ಮಿ-
ಕ್ಕಿದ್ದು ಬಾಳು ಕೇಳು !
ಬಾಳನ್ನ ಸೀಳು, ಗೋಳನ್ನ ತಾಳು; ಕಾ-
ಳನ್ನ ತೂರಲೇಳು !
ನಿನ್ನೊಡಲ ಸಿಡಿಲು ಸಿಡಿದಾತು ಕಡಲು ಕಡೆ-
ಯೆಲ್ಲಿ ಅದಕ ಹೇಳು !
ಕಡೆಯಿರದ ಕಡಲು ಸುಡಸುಡನೆ ಸುಡಲು ಮ್ಯಾಲ್
ಮೂಡಿತೊಂದು ಚೇಳು !

೫

ಆಡಾsಕ ನಿಂತಿ ನೀ ಪಗಡಿ ಎಲ್ಲ ತಾರಾ ತಿಗಡಿ
ಮೂಗ್ಗ ಬಂತು ನೆಗಡಿ—
ಮೊದಲsನ ಇದ್ದೀದಿಯ ಸೊಗಡಿ, ಹಲ್ಲು ಬಿದ್ದ
ಬಗಡಿ ಹಾಂಗ ನಿನ್ನ ಬುಗಡಿ !
ಸವಿಯೆನಿಸಬೇಕು ಹ್ಯಾಂಗ ಕೂಳು, ತಿಂಬುದೆಲ್ಲ ಹಾಳು
ಇಲ್ಲದಕ ಸ್ವಾದಾ !
ಅಸ್ವಾದದೊಳಗ ಸುಸ್ವಾದ ಕಾಣಬೇಕs
ನಾದ ಕೇಳು ಪಡಿಸಾದಾ !

———— ಅರುವತ್ತೊಂಬತ್ತು ————

೬

ಹುಲಿ ಕರಡಿ ತುಂಬಿರುವ ಮರಡಿ ನೋಡ ನೀ
ಕುರಡಿ ಕಂಗಳಿದ್ದು—
ಮರಡ್ಯಾಗ ಸಂತಿ ಸೇರೇದ ಹಂತಿ, ತಿಂ-
ದೀಯು ಪೆಟ್ಟು, ಬಿದ್ದು !

ಗೋಕಾಂವಿ ಬೇಕೊ, ಬಾದಾಂವಿ ಬೇಕೊ, ಬೆಳ-
ಗಾಂವಿ ಸಂತಿ ಬೇಕೋ ?
ಗೋಕಾಂವಿ ಜೆಲ್ಲ, ಬಾದಾಂವಿ ಅಲ್ಲ, ಬೆಳ-
ಗಾಂವಿ ಬೆಳಕೆ ಬೆಳಕೋ !



೧

ಸ್ವಾತಂತ್ರದ ಹುಯಿಲೆ ಹುಯಿಲು !
ಸ್ವಾತಂತ್ರ್ಯವೊ, ಬಯಲೆ ಬಯಲು !
ಪ್ರಕೃತಿ ತನ್ನ ಕಟ್ಟಳೆಗಳ
ಕೋಟಿಗಳನು ನಿರ್ಮಿಸಿಹಳು ;
ಪ್ರತಿ ಜೀವವ ಪ್ರತಿ ಜಡವನು
ಕಟ್ಟಳೆಯಲಿ ಬಂಧಿಸಿಹಳು
    ಬಂಧ ಹರಿವೆನೆಂದರೆ—
    ಲೋಕಕೆ ಅದೆ ತೊಂದರೆ !

೨

ಬಾಳಿದೊಂದು ಆಟವೆ ಸರಿ !
ಆಟದಿಂದ ಸುಖವೊ ? ಸರಿ !
ಸುಖ ಸ್ವಾತಂತ್ರ್ಯದೊಳೆ ? ಮರಿ !
ಅಂತಿದ್ದರೆ, ಆಟದ ಮ
ಗೊತ್ತಿಲ್ಲವೆ ? ಆಟ ಕೂಡ
ತಂತ್ರಬದ್ಧವೆಂಬುದನರಿ !
    ತಂತ್ರವಿರದ ಬಾಳು—
    ಗೋಳು, ಹಾಳು, ಬೀಳು !

★ ★ ★

– ಪಲ್ಲವಿ –

ಜಯ ಜಯ ಭಾರತ ಭೂಮಾತೇ— ಜಯ
ಜಯ ಮಹಿಮಾಕುಲವಿಖ್ಯಾತೇ!
ಜಯ ಸತ್ಯಸಾರ ಸಂಭೂತೇ....
ಜಯ ಜಯ ಭಾರತ ಭೂಮಾತೇ!

೧

ವರುಣದೇವ ವರವಾಗಿ ನೀಡಿರುವ
ಶರನಿಧಿಗಳು ಘೂರ್ಣಿಸುತ....
ಮೊರೆಯುತಿಹವು ಹಗಲಿರುಳನು ಗಣಿಸದೆ
ನಿನ್ನ ಯಶದ ಸಂಗೀತ !
ಮೂಡಣ ಪಡುವಣ ತೆಂಕಣ ಗಡಿಯೊಳು
ಎಲ್ಲೆಲ್ಲಿಯು ಜಲದೂತ—
ಹೂಡಿಯಿರುವ ಕಾಪಿನ ಕಡುಗೋಂಟೆಯು
ನಿನ್ನ ರಾಜ್ಯ ನಿರ್ಭೀತ!
ಹೆಣೆದಿವೆ ಅಲೆಗಳ ಮಾಲೆ....ರ-
ಕ್ಷಣೆಯನು ಪಡೆದಿವೆ ಮೇಲೆ....ಓ
ಜನನಿ, ನಿನಗಿರದು ಸೋಲೇ!
ಜಯ ಜಯ ಭಾರತ ಭೂಮಾತೇ—ಜಯ-
ಜಯ ಮಹಿಮಾಕುಲವಿಖ್ಯಾತೇ!

೨

ಗಿರಿಯ ರಾಜ ಪರಿವಾರ ಸಹಿತ ನಿಂ-
ತಿರುವ ಬಡಗಲಲ್ಲಿ....
ಹೊರೆಯುತಿರುವ ದಿಗ್ನಾಗನಾಗಿ ನಿಡು-
ನೋಟಗಳನು ಚೆಲ್ಲಿ;

ಹರಿಸುತಿಹನು ನಿರ್ಝರಿಣಿಗಳನು ನೂ-
ರಾರು ರೂಪಗಳಲಿ....
ಸಿರಿಯಿಂದಲಿ ನಿನ್ನರಮನೆ ತುಂಬುವ
ಹೃದಯಾಕೂತಿಯಲಿ.
ಸುರಗಂಗೆಯನಿಳುಹಿರುವ—ಸುಧೆ-
ಯೊರತೆಯನ್ನು ಬಲಿದಿರುವ—ಬಲ-
ದರಿಮೆಯನ್ನು ಬೆಳಸಿರುವ....
ಜಯ ಜಯ ಭಾರತ ಭೂಮಾತೇ—ಜಯ
ಜಯ ಮಹಿಮಾಕುಲ ವಿಖ್ಯಾತೇ !

೩

ಮೊದಲು ನಿನ್ನಂಗಣದಲಿ ಹರಡಿದನು
ರವಿಯು ಕಿರಣ ಜಾಲಾ....
ಮೊದಲ ಬೆಳಕು ಕಂಡವಳು ನೀನೆ, ತೋ-
ರಿದೆಯೆ ಲೋಕಕೆಲ್ಲಾ !
ನಿನ್ನ ಸಂತಾನ ಮನು-ಮುನಿ ವಿತಾನ
ಹಾಡಿ ಸಾಮಗಾನಾ....
ಬನ್ನಗಳನು ನೀಗಿಸಿತು ಬಾಳಿನೊಳೆ
ಮಾಡಿ ಅಮೃತಪಾನಾ !
ಜಗವು ಜಡತೆಯಲ್ಲಿರಲು—ನಿನ-
ಗೊಗೆಯಿತಂದೆ ಮುಂಬಗಲು—ಇದು
ನಿನ್ನ ಪುಣ್ಯದೊಂದರಳು....
ಜಯ ಜಯ ಭಾರತ ಭೂಮಾತೇ— ಜಯ
ಜಯ ಮಹಿಮಾಕುಲ ವಿಖ್ಯಾತೇ !

೪

ಧರ್ಮದೈವತದ ಮರ್ಮವರಿದು ಕೈ-
ಗೊಡುತ ಕರೆದು ತಂದೆ....
ಕರ್ಮದಾ ಹುರುಳ ಮೊರ್ಮೊದಲೆ ತಿಳಿದು
ದುರ್ಮತಿಯನೆಲ್ಲ ಕೊಂದೆ.
ನೂರು ನೂರು ತೆರೆಯೂರಿನಲ್ಲಿ ಮರೆ-
ಗೊಂಡ ಸತ್ಯಮುಖವ....
ಏರಿ ಮೇಲೆ, ತೆರೆಹಾರಿಸುತ ಜಗಕೆ
ತೋರಿದೆ ನಿಜಸುಖವ.
ಕವಿರಾಜರ ನೀ ಕರೆದೆ—ನವ-
ನವ ಕಾವ್ಯದ ಮಳೆಗರೆದೆ—ಭುವಿ-
ಗೆಲ್ಲ ಜೀವಕಳೆಯೆರೆದೆ....
ಜಯ ಜಯ ಭಾರತ ಭೂಮಾತೇ—ಜಯ
ಜಯ ಮಹಿಮಾಕುಲ ವಿಖ್ಯಾತೇ !

★ ★ ★

## ೩೪ * * ಏರಿತು ಗಗನಕೆ ನಮ್ಮ ಧ್ವಜ!

ಏರಿತು ಗಗನಕೆ ನಮ್ಮ ಧ್ವಜ!
ಭಾರತ ಭಾಗ್ಯರವಿಯ ತೇಜ!

೧

ಮರವೆಯಿಂದ ಜನಮನ ಜಾಗರಿಸಿ,
ಪರದಾಸ್ಯದ ಜಾಲದ ಭಯ ಹರಿಸಿ,
ಹುರುಳ ಹುರುಪನೀ ಬಾಳಲಿ ಬೆರಸಿ,
ಏರಿತು ಗಗನಕೆ ನಮ್ಮ ಧ್ವಜ—
ಭಾರತ ಶಕ್ತಿಯ ವೀರಭುಜ!

೨

'ಎಲ್ಲಿದೆ ಬಾಧನ ಬಲದಾಕ್ರಮಣ?
ಎಲ್ಲಿದೆ ಶಾಸನರಾಹುಗ್ರಹಣ?
ಎಲ್ಲವ ಸಿಲ್ಲಿಸಿ ಬಿಡುವೆನೀ ಕ್ಷಣ!'
ಸಾರುವುದೀತೆರ ನಮ್ಮ ಧ್ವಜ—
ಭಾರತ ಪೌರುಷ ಸುರಭೂಜ!

೩

ದೇಶ-ದೇಶಗಳ ಜನತೆಗೆ ಅನ್ನ,
ಪಾಶವ ಹಿಂಸೆಯ ತಡೆಯುವ ತ್ರಾಣ,
ತೋಷದಿ ಬಾಳುವ ಸಮತೆಯ ಜ್ಞಾನ
ಬೀರಲು ಏರಿದೆ ನಮ್ಮ ಧ್ವಜ—
ಭಾರತ ರಾಷ್ಟ್ರೋದಯ ತೇಜ!

* * *

ಏರಿತು ಗಗನಕೆ ನಮ್ಮ ಧ್ವಜ—
ಭಾರತ ಭಾಗ್ಯರವಿಯ ತೇಜ!

★ ★ ★

೧

ಸಾಸಿರ ವಕ್ತ್ರದ ಸಾಸಿರ ನೇತ್ರದ
ಸಾಸಿರ ಪದಗಳ ವ್ಯಕ್ತಿ—
ಸಾಸಿರ ಚಿತ್ತದ ಸಾಸಿರ ಹೃದಯದ
ಸಾಸಿರ ಬುದ್ಧಿಯ ಶಕ್ತಿ!

೨

ಈ ಶಕ್ತಿಯೆ ದಿಟವಿಂದಿನ ದೈವತ,
ಪೂಜೆಯಿದಕೆ ಬೇಕು—
ಪೂಜೆ ದೊರೆಯದಿರೆ ದೈವತವಲ್ಲಿದು,
ದೆವ್ವವಯ್ಯೊ! ಸಾಕು!!

೩

ಕಲ್ಲು-ಕಂಚು-ಕಟ್ಟಿಗೆಯ ಮೂರ್ತಿಗಳೆ
ದೇವರೆಂಬಿರೇನು?
ಅಲ್ಲಸಲ್ಲವವು ಬರಿಯ ಗೊಂಬೆಗಳೆ,
ಮಾಡಬಲ್ಲವೇನು?

೪

ಒಳಿತು-ಹದುಳಗಳ ಗೆಲವು-ಮೇಲುಗಳ
ಸೆಳೆದು ತರುವುದೀ ಶಕ್ತಿ—
ಮುಳಿದರೆ ಇದು ಮನುವಿನ ಕುನ್ನಿಗಳಿಗೆ
ಇರುವುದೆಲ್ಲಿಯಾ ಮುಕ್ತಿ?

——— ವಿಶ್ವಕರ್ತರು ———

೫

ಚೆಲುವು-ಚೆನ್ನಿನಲಿ ಇಳೆಯನು ತುಳುಕಿಸಿ
ನಲಿಸಲು ಬಲ್ಲದಿದು ;
ಪ್ರಳಯದ ಬಳಗವ ಕರೆದು ಲೋಕಗಳ-
ನಳಿಸಲು ಬಲ್ಲದಿದು !

೬

ವಿಷಮತೆಯಿಂದಿದನರ್ಚಿಸೆ ಮೆಚ್ಚದೆ
ಮುಳಿದೆದ್ದಾಡುವುದು—
ಸಮತೆಯ ಪೂಜೆಯ ಸಲಿಸಿದರಿದು ಸುಖ-
ಶಾಂತಿಯ ನೀಡುವುದು.

೭

ಸಾಸಿರ ವಕ್ತ್ರದ ಸಾಸಿರ ನೇತ್ರದ
ಸಾಸಿರ ಪದಗಳ ವ್ಯಕ್ತಿ—
ನಾಶವನರಿಯದ ಕಡೆ-ಮೊದಲಿಲ್ಲದ
ಭೀಕರ ಶಂಕರ ಶಕ್ತಿ !

* * *

೧

ಜಯವು ಶಾಂತಿಯ ಶರಣ, ಭಾರತ-
ಪಾರತಂತ್ರ್ಯನಿವಾರಣಾ !
ಜಯ ಮಹಾತ್ಮಾ, ಜಯವು ಮೋಹನ,
ಪತಿತಜನ ಸಂಜೀವನಾ !

೨

ಬೆಳಕು ಬಿದ್ದಿತು ಭರತಭುವಿಯಲಿ
ಜನ್ಮಿಸಲು ಗುರುಗಾಂಧಿಯು,
ಕಳಕಳನೆ ನಗೆಯೆದ್ದು ನಿಂತಿತು,
ಶಾಂತಿ-ಸೌಖ್ಯದ ನಾಂದಿಯು !

೩

ಭರತಮಾತೆಯ ಪೂರ್ವಪುಣ್ಯವೆ
ಪುರುಷರೂಪವ ತಳೆಯಿತೋ,
ಕರಮಚಂದರ ಮನೆಯೊಳಾಡುತ
ಅರಿವನುಣ್ಣುತ ಬೆಳೆಯಿತೋ !

೪

ಪುಣ್ಯಪುರುಷನ ತೆರೆದ ಕಂಗಳು
ಕಂಡವೈ ಜನದವನತಿ ;
ತನ್ನ ತಾಯ್ನೆಲ ಅನ್ನಿಗರ ವಶ—
ಅಣ್ಣ-ತಮ್ಮರ ದುರ್ಗತಿ !

೫

ಪೊಡವಿ ತಮ್ಮದು, ದುಡಿಮೆ ತಮ್ಮದು,
ಕಡೆಯಿರದ ಸಿರಿ ತಮ್ಮದು....
ಒಡಲಿಗನ್ನವು ಉಡಲು ವಸನವು
ಇರದೆ ಜನ ಬಾಯ್‌ಬಿಡುವುದು !

೬

ನೋಡಿದನು ಗುರುಗಾಂಧಿದೇವನು—
ನಾಡಿಗರ ಪರಿತಾಪವ ;
ಓಡಿಸುವೆ ಪರದಾಸ್ಯಭೂತವ-
ನೆಂದು ಹಿಡಿದನು ಚಾಪವ!

೭

ಕತ್ತಿಯಿಲ್ಲದ ನೆತ್ತರಿಲ್ಲದ
ಸತ್ಯಸಮರದ ನೀತಿಯ—
ಒತ್ತಿಸಾರುತ ಕಿತ್ತಿಸಿದನಿವ
ಹಗೆಯ ಹಿಂಸೆಯ ಭೀತಿಯ !

೮

ಭರತಧರಣಿಯೊಳೆಲ್ಲ ತಿರುಗುತ
ಮುರಲಿಯೂದಿದ ಮೋಹನ ;
ಕುರಿಜನರು ನರಹರಿಗಳಾದರು,
ಅರಿತರೋ ತಮ್ಮಾಳ್ತನ !

——— ಎಪ್ಪತ್ತೊಂಬತ್ತು ———

೯

ಹಗೆಯು ಸೋತನು, ಶರಣುಬಂದನು,
ಜಗದ ಗುರು ನೀನೆಂದನು ;
ನಗುತ ಗಾಂಧಿಯು ಹಗೆಯನಪ್ಪುತ
ಗೆಳೆಯನಾಗಿಯೆ ನಿಂದನು.

೧೦

ಇಂದು ಗಾಂಧಿಯ ಗೆಯ್ಮೆಯಿಂದಲಿ
ಬಂಧಮುಕ್ತಳು ಭಾರತಿ,
ಎಂದೆ ಕಂದರು ಸೇರಿ ಗಾಂಧಿಗೆ
ಬೆಳಗುವೆವು ನಾವಾರತಿ !

೧೧

ಜಯವು ಶಾಂತಿಯ ಶರಣ ಭಾರತ-
ಪಾರತಂತ್ರ್ಯನಿವಾರಣಾ !
ಜಯ ಮಹಾತ್ಮಾ ಜಯವು ಮೋಹನ
ಪತಿತಜನ ಸಂವಾಹನಾ !

* * *

– ಪಲ್ಲವಿ –

ನಮನವಿದೋ, ನಮನವಿದೋ, ನಮನ ಸಹಜಯೋಗಿ!
ಸಮತೆಗಾಗಿ ಬಾಳ್ವೆಯನೇ ಜೇಳ್ದ ನವವಿರಾಗಿ!

೧

ಕತ್ತಲಲಿಯು ಗುರಿಯ ದಾರಿ ಕಾಂಬ ಕಣ್ಣು ನಿನ್ನದೊ,
ತತ್ತ್ವಪಾತೆಯಶ್ರುತ ರವ ಕೇಳ್ವ ಕಿವಿಯು ನಿನ್ನದೊ,
ವಿಗಡ ರಜದೊಳಿದ್ದು ಸೊಪಡು ತಗಲದ ಮನ ನಿನ್ನದೊ,
ಜಗದ ಸೌಖ್ಯಕೆಂದೆ ಬೆರಳನೆಣಿಪ ಬುದ್ಧಿ ನಿನ್ನದೊ....
ನಮನವಿದೋ, ನಮನವಿದೋ ನಮನ ಸಹಜಯೋಗಿ!

೨

ನಿನ್ನ ಉಸಿರದೊಂದೊಂದೂ ಜಡಕೆ ಜೀವವಿತ್ತಿತೊ,
ನಿನ್ನ ಧಮನಿಮಿಡಿತವಹಹ ಚೈತನ್ಯವ ಬಿತ್ತಿತೊ,
ನಿನ್ನ ವಾಣಿ ದಿಗ್ದೇಶಕೆ ನನ್ನಿಯ ನೆಲೆ ತಿಳುಹಿತೊ,
ನಿನ್ನ ಗೆಯ್ಮೆ ಸಾವ ಜೀವಜಂಗುಳಿಯನ್ನುಳುಹಿತೊ....
ನಮನವಿದೋ, ನಮನವಿದೋ, ನಮನ ಸಹಜಯೋಗಿ!

೩

ಮೈತ್ರಿಯಿಂದೆ ಶತ್ರುಗಳನು ಸೋಲಿಸಿರುವ ವೀರ,
ಮೃತ್ಯುವನೂ ಮಿತ್ರನಂತೆ ಸ್ವಾಗತಿಸಿದ ಧೀರ,
ನಿನ್ನ ನೌಕೆ ನಂಬಿದರನು ತಲ್ಪಿಸಿತ್ತೆ ತೀರ—
ನೀನು ನಡೆದ ದಾರಿಯದೇ ಸತ್ಯಧರ್ಮ ಸಾರ....
ನಮನವಿದೋ, ನಮನವಿದೋ, ನಮನ ಸಹಜಯೋಗಿ!

೪

ಬಲುಮೆ-ಮೋಸಗಳನು ಹಣಿಯೆ ಕಲಹಗೈದೆ ರಾಜ !
ಕಲಿಸಿದೆ ಜೀವನವ ಚೆಲ್ವುಗೊಳಿಪ ಕಲೆಯನೋಜ !
ನಿಲಿಸಿದೆ ನಾಡಿಗರ ಹೃದಯದೊಳಗೆ ದಿವ್ಯತೇಜ—
ಸಲಿಪುದೆಂತು ಶ್ರದ್ಧಾಂಜಲಿ ಎಲ್ಲರಂತೆ ಸಾಜ !....
ನಮನವಿದೋ, ನಮನವಿದೋ, ನಮನ ಸಹಜಯೋಗಿ !

* * *

ನಮನವಿದೋ, ನಮನವಿದೋ, ನಮನ ಸಹಜಯೋಗಿ,
ಸಮತೆಗಾಗಿ ಸರ್ವಸ್ವವ ತೆತ್ತ ಮಹಾತ್ಯಾಗಿ !

* * *

– ಪಲ್ಲವಿ –

ಕರೆಯಿತು ಜಾಗೃತ ವಿಹಗಕುಲ....
ನೆರೆಯಿತು ರಾಗದಿ ಗಗನತಲ!

೧

ಇಳೆಯನು ಬಳಸಿದ ತಾಮಸ ಜಾಲ....
ಕಳೆಯಲು ಮೂಡಿತು ಕಾಂತಿಯ ಮೂಲ!
ಕಳಕಳ ನಗುತಿದೆ ಅರಳಿದ ಕಮಲ....
ಅಳಿವೃಂದವು ಗುಂಜಾರವಲೋಲ—
ಕರೆಯಿತು ಜಾಗೃತ ವಿಹಗಕುಲ!

೨

ಮಿಸುನಿರಸದ ತೊರೆ ಮೀರಿತು ತೀರ,
ಬಾನಿಂದಿಳಿಯಿತು ಭುವನಕೆ ಪೂರ;
ಕಣ್ಣೆದೆ ಸೆಳೆವುದು ಶುಭಶೃಂಗಾರ
ಜೀವನ ಕಾವ್ಯದ ನವರಸಸಾರ....
ಕರೆಯಿತು ಜಾಗೃತ ವಿಹಗಕುಲ!

೩

ಎಲ್ಲಿ ಅಡಗಿತೋ ನಿದ್ರೆಯ ಭೂತ!
ಎಲ್ಲೆಡೆ ಕಾಣ್ಬಳು ಪೃಥಿವಿ ಜಾಗೃತ—
ಉಲ್ಲಸ ಹರಡಿದೆ ಉದಯದ ಗೀತ –
ಮೆಲ್ಲಗೆ ಮೊಗದೋರಿದ ದಿನನಾಥ!
ಕರೆಯಿತು ಜಾಗೃತ ವಿಹಗಕುಲ!

★ ★ ★

– ಪಲ್ಲವಿ –

ಇದೋ ಬಂದ ಭಾನು ತಂದ
ಸ್ವಾತಂತ್ರ್ಯದ ಕಾಂತಿಯ,
ಅದೋ ಓಡಿ ಹೋಯ್ತು, ನೋಡಿ
ಬಲಿದ ನಿಶಾಭ್ರಾಂತಿಯು !

೧

ಓ !—ಮೂಡಣದೀ ನಭದಿ ಹೊನ್ನ
ಯುಗದ ಮೊಳಕೆ ಮೂಡಿತೋ ?
ಆ—ಮೊಳಕೆಯುದೇ ಬಳೆದು ನಿಶೆಯ
ಜತೆಗೆ ಕದನ ಹೂಡಿತೋ !

ಮಂಗಲಮಯಿ ಉಷಾಸರಸಿ
ಭೃಂಗಕುಲದ ಸೆರೆಯ ಹರಿಸಿ
ಸಂಗೀತದಿ ಸುಧೆಯ ಬೆರಸಿ
ಗಾಳಿಗಳಲಿ ತೇಲಿಸೆ—
ಮುಂಗಡೆ ಜನವೆದ್ದು ಬಂತು
ಗೀತದ ಶ್ರುತಿಯಾಲಿಸೆ.

ಇದೋ ಬಂದ ಭಾನು ತಂದ
ಸ್ವಾತಂತ್ರ್ಯದ ಕಾಂತಿಯ,
ಅದೋ ಓಡಿ ಹೋಯ್ತು, ನೋಡಿ
ಬಲಿದ ನಿಶಾಭ್ರಾಂತಿಯು !

೨

ಇಗೊ !—ಬೀತು ಹೋದ ತರುಮರವೂ
ಚಿಗುರಿ ತಳಿತು ನಿಂತಿವೆ,
ಅಗೊ !—ಸೋತು ಬಿಳ್ದ ಲತೆಲತೆಯೂ
ನಗೆಯಲರನ್ನಾಂತಿವೆ

ಪ್ರಾಣವಾಯು ಬೀಸುತಿದೆ.
ತ್ರಾಣಶರಧಿ ಸೂಸುತಿದೆ,
ಹಿಗ್ಗು ಹವೆಯೊಳೀಸುತಿದೆ—
ಎಂತಹದಿದು ಕ್ರಾಂತಿ !
ಜಾಗೃತ ಭಾರತದೊಳಿನ್ನು
ನೆಲೆಗೈವಳು ಶಾಂತಿ !

ಇದೋ ಬಂದ ಭಾನು ತಂದ
ಸ್ವಾತಂತ್ರ್ಯದ ಕಾಂತಿಯು,
ಅದೋ ಓಡಿ ಹೋಯ್ತು, ನೋಡಿ
ಬಲಿದ ನಿಶಾಭ್ರಾಂತಿಯು !

* * *

# ನವಯುಗಾರಂಭ * * * ೪೦

( ಭಾರತ ಸ್ವಾತಂತ್ರ್ಯದಿನದಂದಿನ ಉಲ್ಲಸಿತಭಾವನೆಯ ಉತ್ಸಾಹ ಪ್ರಗಾಥ )

೧

ಇಂದಿನುದಯ ರವಿ ತಂದಿಹನ್ನೈ, ತ-
ನ್ನೊಂದಿಗೆ ನವಯುಗವ,
ಇಂದಿನ ಮಧುರಸಮೀರ ಹರಡುತಿಹ
ಸ್ವಾತಂತ್ರ್ಯದ ಸೊಗವ!

ಇಂದಿನ ಉಸಿರಾಟಕೆ ತಡೆಯಿಲ್ಲವು
ಕಳಚಿ ಕೊರಳ ನೊಗವ—
ಹೊಂದಿಹವೈ ಮನ-ಮನವು ರೆಕ್ಕೆಗಳ,
ಮೀರಿಸಿಹವು ಖಗವ!

ಪ್ರಳಯದಿಳೆಯು ತಮ ಮರೆಯಾಯ್ತೋ—ಕಡ-
ಲೊಳಗಿನ ನೌಕೆಯು ಕರೆಗಾಯ್ತೋ—ಮನು-
ಕುಲದ ಬಾಳ ಗೋಳದು ಹೋಯ್ತೊ....!

ಉಳಿದಿವೆ ಶಕ್ತಿಯ ಬೀಜಗಳೆಲ್ಲವು;
ಕಂಡೆವು ನವಯುಗವ...
ಬೆಳೆಯು ಕೊಂಡು ನಾವಿನ್ನು ಬಲಿಯ ಬೇ-
ಕಾಗಿದೆ ಹೊಸಜಗವ!

ಇಂದಿನುದಯರವಿ ತಂದಿಹನ್ನೈ, ತ-
ನ್ನೊಂದಿಗೆ ನವಯುಗವ—
ಮುಂದಿ ಕಾಣುತಿದೆ ಭಾರತಮಾತೆಯ
ಚೆಂದದ ನಗೆಮೊಗವ!

೨

ಇಂದು ಹುಟ್ಟಿದಣುಗನಿಗೆ ಇಲ್ಲವೈ,
ಪರದಾಸ್ಯದ ಹೊಲೆಯು!
ಬೆಂದುಹೋಯ್ತು ದೆಸೆದೆಸೆಗಳಲ್ಲಿಯೂ
ಹಗೆಯು ಹೆಣೆದ ಬಲೆಯು!

ಹಿಂದೆ ತಿಂದ ಕೂಳೇನ ಕೊಟ್ಟಿತೋ—
ಬರಿಯೆ ಹಂದೆತನವ;
ಇಂದು ಉಂಡ ಊಟವಿದು ತುಂಬುತಿದೆ
ಮನದಿ ಮನುಜಗುಣವ.

ತುಂಡುಗೊಂಡ ಎದೆ ಬೆಸೆದಿಹುವೋ—ಜನ-
ಮಂಡಲದಸುಗಳ ಹೊಸೆದಿಹವೋ—ರಣ-
ಚಂಡಿಯು ಕಂಗಳ ಕೊಸೆದಿಹವೊ....!

ಯಾವ ಭಾವ ಕಂಡಿರುವ ಕನಸು ಮೈ-
ಗೊಳುತಲಿಂದು ಬಂತೋ....
ಯಾವ ಯೋಗ ಸಾಧನವು ನಮಗೆ ಸಂ-
ಸಿದ್ಧಿಯನ್ನು ತಂತೋ!

ಇಂದಿನುದಯರವಿ ತಂದಿಹನೈ ತ-
ನ್ನೊಂದಿಗೆ ನವಯುಗವ—
ಕುಂದದಿರುವ ಪ್ರಭೆಯಿಂದ ಬೆಳಗುವನು
ಭಾಗ್ಯೋದಯನಗವ.

೩

ದೇವನು ಮಿಾನಿನ ಮಾನಕಿಳಿದು ಆ
ಪ್ರಳಯ ಕಳೆದನಂದು ;
ಮಾನವ ದೇವನ ಸ್ಥಾನಕೇರಿ ಈ
ಪ್ರಳಯವಳಿದನಿಂದು !

ದೇವನೊಬ್ಬನೇ ತಂದ ಯುಗಗಳವು
ವೈಷಮ್ಯದ ಒಡಲು,
ಮಾನವನೇ ಮೂಡಿಸಿದೀ ನವಯುಗ
ಸಮತೆಯ ಸವಿಗಡಲು !

ಭಾರತಶಕ್ತಿಯು ದುಡಿ-ದುಡಿದು,—ಕರೆ-
ತಂದಿದೆ ಕಾಲದ ಕೈಹಿಡಿದು—ಇದೆ
ಲೋಕದ ಕಂಗಳ ತೆರೆಸುವುದು....!

ದಾನವತೆಯ ಮೂಲವನೇ ಮುರಿಯುವೆ-
ನೆನ್ನುವುದೀಯುಗವು ;
ಮಾನವರೆದೆಯೊಳೆ ದೇವನಿರುವುದನು
ಕಾಂಬುದಿನ್ನು ಜಗವು !

ಇಂದಿನುದಯರವಿ ತಂದಿಹನೈ ತ-
ನ್ನೊಂದಿಗೆ ನವಯುಗವ—
ಇಂದಿನ ಗಾಳಿಯು ಗೀತಿಸುತಿರುವುದು
ಸ್ವಾತಂತ್ರ್ಯದ ಸೊಗವ !

೪

ತಾರಾಲೋಕದ ಮೇಗಣಿಂದ ಋಷಿ-
ವೃಂದವು ಹರಸುತಿದೆ;
ಭಾರತಕುಲಪಿತೃಗಣವು ಸ್ವರ್ಗದಿಂ
ಹೂಮಳೆಯೆರಚುತಿದೆ.

ಬೆಳ್ಳಿಯ ಬೆಟ್ಟದ ಮೇಲೆ ತ್ರಿಶೂಲಿಯು
ತಾಂಡವ ತೊಡಗಿರುವ—
ಯಕ್ಷ-ರಕ್ಷ ಗಂಧರ್ವ ಕಿನ್ನರರ
ಮೇಳ ಕೂಡಿಸಿರುವ.

ಪೂರ್ವ-ಪಶ್ಚಿಮದ ಕಡಲುಗಳು—ಉ-
ಬ್ಬೇರಿ ಕುಣಿಯುತಿವೆ ಲಹರಿಗಳು—ದನಿ
ಬೀರುತಿಹವು ದಿಗ್‌ಭೇರಿಗಳು....!

ಕೃತ-ತ್ರೇತಾ-ದ್ವಾಪರದ ಯುಗಂಗಳು
ಕಾಣಿಕೆ ತಂದಿಹವೋ!
ನವಯುಗಪುರುಷನ ಭವ್ಯಭವಿಷ್ಯವ-
ನುದ್ಘೋಷಿಸುತಿಹವೋ!

ಇಂದಿನುದಯರವಿ ತಂದಿಹನೈ ತ-
ನ್ನೊಂದಿಗೆ ನವಯುಗವ—
ಇಂದಿನ ಪಾವನ ಪವನ ಹರಡುತಿಹ
ಸ್ವಾತಂತ್ರ್ಯದ ಸೊಗವ!

★ ★ ★

– ಪಲ್ಲವಿ –

ಪ್ರೇಮಸುಧಾಮಯಿ ಶಕುಂತಲೇ !
ಜೀವನಕೌಮುದಿ ಪೂರ್ಣಕಲೇ !

೧

ಸುರಸೌಂದರ್ಯದ ಮನದೊಳು ಮೊಳೆದೆ,
ಪರಮತಪೋರಾಶಿಯ ಫಲ ತಳೆದೆ ;
ಧರಣಿಯ ಚೆಲುವಿನ ಕೆಳೆಯಲಿ ಬೆಳೆದೆ—
ಗುಣಕಾಶ್ಯಪಲಾಲಿತ ಬಾಲೇ,
ಪ್ರೇಮಸುಧಾಮಯಿ ಶಕುಂತಲೇ !

೨

ನಿನ್ನ ಒಲವಿನೆದೆ ಅರಳಿದ ಹೂವೆ,
ನಿನ್ನ ಮುಳಿಸು ಹೆಡೆಯೆತ್ತಿದ ಹಾವೆ,
ನಿನ್ನ ನೀತಿಯೇ ನಾರಿಯರೋವೆ—
ಪಾವನತಾಮಣಿಗಣಮಾಲೆ,
ಪ್ರೇಮಸುಧಾಮಯಿ ಶಕುಂತಲೆ !

೩

ರಾಯ ಭರತನನು ಬಸಿರಲಿ ಧರಿಸಿ,
ತಾಯ್ನೆಲಕಾತನ ಹೆಸರನು ಬರಿಸಿ,
ಸ್ತ್ರೀಯರ ಘನತೆಯ ಮಹಿಯಲಿ ಮೆರಸಿ—
ಅಮರಳಾಗಿ ನೀ ನಿಂದೆಯಲೆ
ಕವಿಕುಲಗುರುವಿನ ಲಲಿತಕಲೆ !

★ ★ ★

- ಪಲ್ಲವಿ -

ಊದುತಿರುವ ಮುರಲಿ—ಶ್ರೀ
ಯಾದವೇಂದ್ರನಿಂದು !
ಕುಂಜವನದಿ ಬಂದು ನಿಂದು,
ಊದುತಿರುವ ಮುರಲಿ !

ಹಿಮಕಿರಣ ನಭದಿ ಹೊಳೆಯೆ,
ಮಧುಪವನ ವನದಿ ಸುಳಿಯೆ,
ಸುಮಜಾತ ಸುರಭಿ ಸುರಿಯೆ -
ರಮಣೀಯ ಭಾವ ಹರಿಯೆ —
ಊದುತಿರುವ ಮುರಲಿ ! ೧

ಬೆಳುದಿಂಗಳಂದವೇನು !—
ಎಳನಗೆಯ ಸವಿಯಜೇನು !
ಕೊಳಗಳಲಿ ಕುಮುದ ಕುಲವು
ಅರಳಿ ಬಾಯ್ದೆರೆಯುತಿಹವು—
ಊದುತಿರುವ ಮುರಲಿ ! ೨

ಮಾಧವನ ಮುರಲಿನಾದಾ
ಆಲಿಸುತ ನಲಿದು ರಾಧಾ,
ಮನ ನೀಡಿ ನಿಲಲು ಬೇಗ
ಕೇಳಿಸಿತು ಪ್ರಣಯರಾಗ—
ಊದುತಿರುವ ಮುರಲಿ ! ೩

ಬಾ ರಾಧೆ, ರಾಧೆ—ಎಂದು
ಆ ರವವು ಕರೆಯುತಿಹುದು :
ಮನೆ-ಮಾರುಗಳನೆ ತೊರೆದು
ನಡೆದಳು ಕೊಳಲುಲಿಯ ಹಿಡಿದು
ಊದುತಿರುವ ಮುರಲಿ ! ೪

ನೋಡಿದಳು ರಾಧೆ ಬನವ,
ಕೂಡಿರುವ ಚೆಲುವುಧನವ ;
ಬನದ ತರು-ಲತೆಗಳೆಲ್ಲಾ
ಬಿನದದಲಿವೆ ಕೇಳಿ ಕೊಳಲ !
ಊದುತಿರುವ ಮುರಲಿ ! ೫

ಕೇಳುತ್ತಿದೆ ಮುರಲಿಯುಲಿಯು
ಕಾಣದಿದೆ ಪ್ರಿಯನ ನೆಲೆಯು ;
ಕಳವಳದಿ ಹುಡುಕುತಿಹಳು
ಒಳಗೆ ಬಲು ಮಿಡುಕುತಿಹಳು— ೬
ಊದುತಿರುವ ಮುರಲಿ !

' ಎಲ್ಲಿರುವ ನನ್ನ ಶ್ಯಾಮ ?
ಎಲ್ಲಿಹನೊ ಪ್ರೇಮಧಾಮ ? '
ಬಾಯ್‌ಬಿಡುತಲಿಂತು ಮರುಗಿ
ಸುಯ್ದು ಕುಳಿತಿರಲು ಸೊರಗಿ—
ಊದುತಿರುವ ಮುರಲಿ ! ೭

ಶ್ಯಾಮನೆಲ್ಲಿಂದ ಬಂದ ? —ಓ
ರಾಮೆಯೆದುರಿನಲಿ ನಿಂದ !
ಹಮ್ಮೈಯಿಸಿ ತನ್ನ ಮರೆತು,
ಒಂದಾದಳು ಪ್ರಿಯನ ಬೆರೆತು—
ಊದುತಿರುವ ಮುರಲಿ ! ೮



## ೪೩ * * * ಶ್ರಾವಣಸಮೀರ!

ಬಾ, ಶ್ರಾವಣ ಶುಭಸಮೀರ ಬಾರಾ!

ಬಾರೈ ಶ್ರಾವಣ ಸಮೀರ,
ಕಾಲನೊಲುಮೆಯೋಲೆಕಾರ,
ಸುಖನಾಟಕ ಸೂತ್ರಧಾರ,
ಬುವಿಯ ಬೇಟಗಾರಾ!
ಬಾ, ಶ್ರಾವಣ ಶುಭಸಮೀರ ಬಾರಾ! ೧

ಪಡುಗಡಲಿಗೆ ತೆರೆಯ ಹೇರಿ,
ಜಡಿಯ ಮುಗಿಲ ಕೆಳೆಯ ಸೇರಿ,
ನಿಡುಮಲೆಗಳ ತಲೆಯನೇರಿ,
ಕಣಿವೆಯಿಳಿದು ಬಾರಾ!
ಬಾ, ಶ್ರಾವಣ ಶುಭಸಮೀರ ಬಾರಾ! ೨

ತೆಂಗು-ಕಂಗು ಬಾಳೆ-ಹಲಸು,
ಹೊಂಗೇದಗೆ ಬನದ ಬೆಳಸು,
ನಿನ್ನಿಂದಲೆ ಎಲ್ಲ ಹುಲುಸು!
ಸಿರಿಯ ಸಂಚುಗಾರಾ!
ಬಾ ಶ್ರಾವಣ ಶುಭಸಮೀರ ಬಾರಾ! ೩

ಬನದ ತರುವನೊಲೆದಾಡಿಸಿ,
ತೊನೆವ ಲತೆಯ ನಲಿದಾಡಿಸಿ,
ಬೆಳಕಿಗು ಹಸಿರನು ಕೂಡಿಸಿ,
ಚತುರ ಶಿಲ್ಪಧೀರಾ!
ಬಾ, ಶ್ರಾವಣ ಶುಭಸಮೀರ ಬಾರಾ! ೪

ಬಾಯ್ದೆರೆದಿದೆ ಬಯಲುನೆಲ,
ಕಾಯ್ದಿದೆ ಇದೊ ಬೀಜಕುಲ,
ಬಂದು ಸುರಿಸು ಚೈತ್ಯಜಲ
ಮಳೆಯ ಮೋಡಿಕಾರಾ!
ಬಾ, ಶ್ರಾವಣ ಶುಭಸಮೀರ ಬಾರಾ! ೫

ಬೆಳುವಲಿಗರ ಬರಿಯ ಮನೆ—
ನೀನೊಲಿದರೆ ಸಿರಿಯ ತೆನೆ!
ಉಲಿದು ನಲಿದು ರುಮುಝುಮು ಎನೆ
ಸುಳಿ ಸುಳಿ ಸುಖಸಾರಾ!
ಬಾ, ಶ್ರಾವಣ ಶುಭಸಮೀರ ಬಾರಾ! ೬

ನಿನ್ನ ಗತಿಯು ಗೆಜ್ಜೆನಾದ
ನಲ್ಲ-ನಲ್ಲರೆದೆಗೆ ಮೋದ
ಶೃಂಗಾರದ ಸುಖೋನ್ಮಾದ-
ಸೃಷ್ಟಿಗೆ ಸಹಕಾರಾ!
ಬಾ, ಶ್ರಾವಣ ಶುಭಸಮೀರ ಬಾರಾ! ೭



(ಭಾರತ ಸ್ವಾತಂತ್ರ್ಯೋದಯದ ರೂಪಕ)

ಇದೊ, ಶ್ರಾವಣಬಂದಿದೆ ಭುವನಕೆ,
ಜನಜೀವನ ಪಾವನ ಗೈಯಲಿಕೆ—
ಇದೊ, ಶ್ರಾವಣ ಬಂದಿದೆ ಭಾರತಕೆ!

೧

ತೆರಳಿತು ವೈಶಾಖದ ಬಿರುಬಿಸಿಲು,
ಸರಿಯಿತು ಮೃಗಜಲದಾ ಹುಸಿಹೊನಲು;
ಮರೆಯಾಯಿತು ಸುಟ್ಟುರಿಗಳ ಹೊಯಿಲು,
ಬರಿ ಬಾನೊಳು ತುಂಬಿದೆ ನೀರ್ಮುಗಿಲು!
ಬರಗಾಲದ ಬಾಧೆಯ ಹಣಿಯಲಿಕೆ—
ಇದೊ, ಶ್ರಾವಣ ಬಂದಿದೆ ಈ ನೆಲಕೆ!

೨

ಮುಂಗಾರಿನ ಕಾರ್ಮೋಡದ ಕೂಟ....
ಮುನ್ನೀರಲೆಗಳ ತಾಂಡವದಾಟ....
ಕಂಗೆಡಿಸುವ ಕೋಲ್ಮಿಂಚಿನ ಕಾಟ....
ಹಿಂಗಿದುವೋ ಸಿಡಿಲಿನ ಗುಡುಗಾಟ—
ಸಮಯೋಗದ ಸರಿಯನು ಸುರಿಸಲಿಕೆ
ಇದೊ, ಶ್ರಾವಣ ಬಂದಿದೆ ಭೂತಲಕೆ!

೩

ಕಾಡುವ ತಗರಿನ ಕೊಂಬನು ಕಳೆದು....
ಹೋರುವ ಹೋರಿಯ ಹಮ್ಮನು ಹಿಳಿದು....
ಹೆಣ್-ಗಂಡನು ಹುರುಪಿಸಿ ಮನಸೆಳೆದು....
ರಣಹೇಡಿ ಏಡಿಯಾ ತಲೆ ತುಳಿದು....

ವ್ಯಗರಾಜನ ಮೈಗುಣ ಮೆರೆಸಲಿಕೆ—
ಇದೊ, ಶ್ರಾವಣ ಬಂದಿದೆ ಈ ನೆಲಕೆ!

೪

ಬಾನೊಳು ತುಂಬಿದೆ ಜೀವನ ಜಲವು....
ಬುವಿಯೊಳು ತಂಗಿದೆ ಬೆಳಸಿನ ಬಲವು....
'ಏಳಲಿ, ಏಳಲಿ, ಕೃಷಿಕರ ಕುಲವು'....
ಗಾಳಿ ಕೂಗುತಿದೆ ಕೇಳದೆ ಉಲಿವು?
ನಮ್ಮೆಲ್ಲರ ಹಸಿವನು ತಣಿಸಲಿಕೆ—
ಇದೊ, ಶ್ರಾವಣ ಬಂದಿದೆ ಭೂವನಕೆ!

೫

ಬರತ ತೊರೆಗಳದೊ, ಸೂಸಿ ಹರಿದಿವೆ....
ಅರತ ಕೆರೆಗಳಗೊ, ತುಂಬಿ ಮೆರೆದಿವೆ....
ಬರಡು ಬಳ್ಳಿ-ಗಿಡ ಚಿಗಿತು ನಗುತಿವೆ....
ಬರಿಹೊಲ-ನೆಲ ಸಸಿ-ಹಸಿರನುಗುತಿವೆ....
ಚೆಲುವಿಂಗೆ ಗೆಲವ ತಾನೀಯುಲಿಕೆ—
ಇದೊ, ಶ್ರಾವಣ ಬಂದಿದೆ ಭೂತಲಕೆ!

೬

'ಬಂದಿದೆ ಗೆಳೆಯರೆ ನಲ್ಮಳೆಗಾಲ....
'ತಂದಿದೆ ಬಲ್‌ಬೆಳಸಿಗೆ ಹದಗಾಲ....
'ಉಳುಮೆ-ಬಿತ್ತಿಗೆಗೆ ಇದುವೆ ಸಕಾಲ....
'ಕಳೆದುಕೊಳ್ಳದಿರಿ, ನಿಮ್ಮಯ ಪಾಲ'—
ಇಂತೊರೆದು ಜಗವ ಜಾಗರಿಸಲಿಕೆ—
ಇದೊ, ಶ್ರಾವಣ ಬಂದಿದೆ ಈ ನೆಲಕೆ!

೭

ಶ್ರಾವಣದೀ ಶುಭಯೋಗವೆಂಥದೋ
ದೇವಭಾವ ತಲೆಯುತ್ತಿ ನಿಂತುದೋ!
ಹಾವು-ಹುಳುವನೂ ದೇವರು ಎನುವ ...
ಭಾವನೆಯಲಿ ಜನ ಪೂಜಿಸುತಿಹುದೊ!
ಆ ದೇವನ ಮಹಿಮೆಯ ಗಾಯನಕೆ—
ಇದೊ, ಶ್ರಾವಣ ಬಂದಿದೆ ಭೂವನಕೆ!

೮

ಕನಸಿರದಾ ನಿದ್ದೆಯನೋಡಿಸುತ....
ಮನದಾಶೆಗೆ ಕುಸುರನು ಮೂಡಿಸುತ....
ಮನುಕುಲವನ್ನೆ ಉಯ್ಯಾಲೆಯಾಡಿಸುತ ...
ಕಣಸಿನ ಕತೆಗಳ ಕೊಂಡಾಡಿಸುತ—
ಸವಿಯೊಲವನು ಹಂಚುತ ಮನಮನಕೆ—
ಇದೊ, ಶ್ರಾವಣ ಬಂದಿದೆ ಭೂವನಕೆ!

೯

ಬರಲಿದೆ ಮಾನವಮಿಯ ಬಲರಾಗ .
ಕರೆದಿದೆ ಗೆಲವಿನ ದಸರೆಯ ಭೋಗ....
ತರಲಿದೆ ಇದೆ ದೀವಳಿಗೆಯ ಯೋಗ....
ಬೆಳಕಿನ ರಾಜ್ಯವೆ ಇಳೆಯೊಳಗಾಗ....
ಆ ಬೆಳಕಿನ ದಾರಿಯ ತಿಳುಹಲಿಕೆ—
ಇದೊ, ಶ್ರಾವಣ ಬಂದಿದೆ ಭೂತಲಕೆ!

* * *

ಜನಜೀವನ ಪಾವನ ಗೈಯಲಿಕೆ
ಇದೊ, ಬಂದಿದೆ ಶ್ರಾವಣ ಭಾರತಕೆ!

– ಪಲ್ಲವಿ –

ಕುಣಿಯುತ ಬಂದಿದೆ ದೀವಳಿಗೆ— ಝಣ-
ಝಣಿರೆನೆ ನೂಪುರ ಅಡಿಗಡಿಗೆ!
ತಣಿವನು ಹಂಚಲು ಎಡೆಯೆಡೆಗೆ— ಕುಣಿ-
ಕುಣಿಯುತ ಬಂದಿದೆ ದೀವಳಿಗೆ!

೧

ಮುಸುಕಿದ ಮೋಡವು ಮಸುಳಿತಿದೇನು?
ಹಸನು ಹಸನು ಬೆಳುಗಾಲದ ಬಾನು!
ನಸುನಗುತಿಹ ಬಿಸುಪಿಲ್ಲದ ಭಾನು,
ರಸಮಯವಾಗಿದೆ ಬದುಕಿನ ಜೇನು!

ತಂದಿದೆ ಚೆಲುವನು ದೀವಳಿಗೆ—ಇದೊ
ತಂದಿದೆ ಚೆಲುವನು ದೀವಳಿಗೆ!....
ಚೆಂದದ ಹಸುಗೆಯು ಮನೆ-ಮನೆಗೆ!

೨

ತಿಳಿವಿನ ಬೀಜದ ಎಳಮೊಳಕೆಗಳೋ!
ಬೆಳಕಿನ ಬಳ್ಳಿಯ ನವಕಳಿಕೆಗಳೋ!
ತೊಳಗುವುವಿವು ದೀವಿಗೆಗಳ ಸಾಲೋ!
ಅಳಿಗತ್ತಲೆಗಿರುಳಲ್ಲಿಯು ಸೋಲೋ!

ತಂದಿದೆ ಪ್ರಭೆಯನು ದೀವಳಿಗೆ—ಕರೆ-
ತಂದಿದೆ ಪ್ರಭೆಯನು ದೀವಳಿಗೆ....
ಚೆಂದದ ಹಂದರ ಮನೆ-ಮನೆಗೆ!

೩

ತಳಿದಿದೆ ಪರಿಪರಿ ಪರಿಜವನೊಲವು !
ಬೆಳಗಿ ಶುಭಾರತಿ, ಬೆಳಸಿದೆ ನಲಿವು !
ಕಲಕಿದ ಎದೆ-ಮನಗಳ ಕಹಿನೋವು—
ತೊಲಗಿ, ಮೊಳಗುತಿದೆ ಒಸಗೆಯ ಸೋವು !
ತಂದಿದೆ ಒಲವನು ದೀವಳಿಗೆ—ಇದೊ
ತಂದಿದೆ ಒಲವನು ದೀವಳಿಗೆ....
ಕುಂದದ ಸಂತಸ ಮನೆ-ಮನೆಗೆ !

೪

ಶರದದ ಸಿರಿದೇವಿಯ ಹೊಸ ಮೇಳ
ಸರಿಗಮದೊಂದಿಗೆ ಹಾಕುತ ತಾಳ,
ಸ್ವರವೇರಿಸಿ ಮಂಗಲಗೀತಗಳ
ಒರೆದು ಹುರುಳ ತುಂಬಿರುವುವು ಬಾಳ !
ಬಂದಿದೆ ತಂದಿದೆ ದೀವಳಿಗೆ—ಇದೊ
ಬಂದಿದೆ ತಂದಿದೆ ದೀವಳಿಗೆ....
ನಂದದನಂದವ ಮನೆ-ಮನೆಗೆ !

೫

ವಧುಗಳು ಮರೆತರು ವಿರಹದ ಕಾಟ,
ಹೃದ-ಹೃದಯದಿ ಪ್ರಣಯದ ಚೆಲ್ಲಾಟ !
ಸದನ-ಸದನದಲಿ ಸವಿ-ಸುಖದೂಟ—
ಇದುವೇ ದೀವಳಿಗೆಯ ಮರೆಮಾಟ !
ಕುಣಿಯುತ ಬಂದಿದೆ ದೀವಳಿಗೆ,—ಕುಣಿ
ಕುಣಿಯುತ ಬಂದಿದೆ ದೀವಳಿಗೆ
ತಣಿವನು ಬೀರಿದೆ ಜನಗಳಿಗೆ !

೧

ಇದ್ದರೂ ಸತ್ತಂತೆ ಇರುವವರೆ ಬಹುಜನರು,
ಇದ್ದವರಿಗೆಲ್ಲ ಸಾವಾಗಿ ಇರುವರು ಕೆಲರು,
ಮೊದ್ದುತನದಲಿ ಸಾವಿಗಂಜಿ, ಬದುಕನೆ ಸಾವು-
ಮಾಡಿಕೊಂಡವರು ಹಲರು!

ಇದ್ದಾಗ ನಿನ್ನಂತೆ ಇದ್ದವರು ಯಾರಿಹರು?
ಬಿದ್ದವರ ಬಾಳಲ್ಲಿ ಜೀವಕಳೆಯನ್ನೂದಿ
ಸಿದ್ಧಿ ತುಂಬಿದರಾರು, ನಿನ್ನವೋಲು ಗಾಂಧೀಜಿ
ಸಾವಿರದ ಶೂರರಾರು?

೨

ನೀನು ಮಾನವನೇನು? ಮರುಳಿದು
ಮಾನವನು ನೀನೆಂಬುದು;
ಮಾನವತೆಯಾದರ್ಶವೇ ಮೈ-
ಗೊಳುತ ಬಂದಿಲ್ಲಿದ್ದುದು

ಕುದಿವ ಮಾನವಲೋಕವನು ಕಂ-
ಡದನು ತಣಿಸಲು ಪ್ರಕೃತಿಯು,
ಹದದಿ ನಿನ್ನನು ರೂಪಿಸುತ ಕಳು-
ಹಿದುದು ನಮ್ಮಯ ಸುಕೃತಿಯು!

ಪಂಚಭೂತಶರೀರಿಯೇ ನೀ
ಪಂಚಭಾವಶರೀರ!
ಕರುಣೆ ಮೈತ್ರಿಯು ಹರುಷ ನಿರ್ಭಯ
ಶಾಂತಿಗಳ ಸಾಕಾರ!

——— ನೂರು ———

೩

ಹೂವಿನರಳುವ ಗುಣವೆ ನಿನ್ನ ನಗೆಯಾಯ್ತೊ,
ಜೇನ ಸವಿ ನಿನಗೆ ಮೆಲುಮಾತನೊದವಿಸಿತೊ!
ಆಗಸದ ಕೇಂದ್ರವೇ ಎದೆಯು ನಿನಗಾಯ್ತೊ,
ಸಾಗರದ ಆಳ ಗಾಂಭೀರ್ಯ ಹವಣಿಸಿತೊ!

೪

ನಿನ್ನ ಕಣ್ಗೆ ರವಿಯ ಪ್ರಭೆಯು
ಹಿಂಗದ ಬೆಳಕೂಡಿತೊ!
ನಿನ್ನ ಭಾವಗಳಲಿ ಅಮರ-
ಗಣವು ಅಮೃತ ನೀಡಿತೊ!
ನೀನು ನುಡಿದುದೆಲ್ಲ ಋಷಿಯ
ದಿವ್ಯಕಾವ್ಯವಾಯಿತೊ,
ನೀನು ನಡೆದುದೆಲ್ಲ ಜನಕೆ
ಬಾಳ ತಿರುಳ ತಿಳುಹಿತೊ!

೫

ನೂರಾರು ವರ್ಷಗಳ ಪಾರತಂತ್ರ್ಯದಿ ಸಿಲುಕಿ-
ಭಾರತೀಯರು ಬಾಯಿ ಬಾಯಿ ಬಿಡುತಿರುವಾಗ
ಪಾರುಗಾಣಿಸಲೆಂದು ಹೋರಾಡಿದರು ಹಲರು!
ದೊರೆಯಲಿಲ್ಲಾರಿಗಾ ಕೀರ್ತಿ;
ನಿಜವು ನೀ ನಿಜ ಯಶೋಮೂರ್ತಿ!
ದಾರಿಯರಿತವ ನೀನು ತೋರಿ ಅವರಿಗೆ ಯುಕ್ತಿ
ಹೂಡಿದೆಯೊ ಗೆಲುವ ಶಕ್ತಿ....
ಮಾಡಿದೆಯೊ ಬಂಧಮುಕ್ತಿ!

——— ನೂರಾಒಂದು ———

೬

ನಿನ್ನ ಮಾತೇ ಮಾತು ತುಂಬಿದೆ
ದಿಕ್ಕು-ದಿಕ್ಕುಗಳಲ್ಲಿ....
ನಿನ್ನ ರೂಪವೆ ನೆಲಸಿ ನಿಂತಿದೆ
ಜಗದ ಜನಮನದಲ್ಲಿ!

ನಿನ್ನ ಉನ್ನತ ಭಾವ ಹರಡಿದೆ
ಗಾಳಿಯಲೆಯಲೆಯಲ್ಲಿ....
ನಿನ್ನ ಕೀರ್ತಿಯು ಕಳಸ ಸಾರಿದೆ
ಬಾನತುತ್ತುದಿಯಲ್ಲಿ!

ಎಲ್ಲೆಡೆಯು ಗಾಂಧೀಜಿಯಾಗಿರೆ
ನಿನಗೆ ಕೊನೆಯಿನ್ನೆಲ್ಲಿ?
ನಿನ್ನನೊಯ್ಯುವ ಬಲವು ಎಲ್ಲಿದೆ
ಮೃತ್ಯುವಿನ ಮೈಯಲ್ಲಿ?

೭

ಶಕ್ತಿಯಿಲ್ಲದ ಮೃತ್ಯು ಯುಕ್ತಿಯೇನನೊ ಹೂಡಿ,
ತನ್ನ ಬಲೆಯೊಳು ಬಿಗಿದು ನಿನ್ನ ಕಟ್ಟಿಹೆನೆಂದು
ಹುಸಿಬಿಂಕದಲ್ಲಿಹುದು,
ಹುರುಪಿನಲ್ಲಿಹುದು....

ಹುಸಿಬಿಂಕದಲ್ಲಿಹುದು, ಹುರುಪಿನಲ್ಲಿಹುದು—
ವ್ಯಕ್ತಿಗಿರುವುದು ಸಾವು, ಶಕ್ತಿಗೆಲ್ಲಿಹುದು?
ಗಾಂಧೀಜಿಯನು ಕೊಂದೆನೆಂದು ಸಾರುವ ಸಾವು,
ಲೌಕಿಕರ ಹೃದಯದಲಿ ಕೆರಳಿಸಿದೆ ನೋವು!

೮

ವ್ಯಕ್ತಿಯೇನೊ ಸಾಯಬಹುದು,
ಶಕ್ತಿಗೆಲ್ಲಿ ಸಾವು ?
ಗರುಡನನ್ನು ಕೆಣಕಿ ಮಾಡ-
ಬಲ್ಲದೇನು ಹಾವು ?

ಗಾಂಧಿಯವರ ಮರೆಮಾಡಿದ
ಸಾವಲ್ಲದ ಸಾವು....
ಮೃತ್ಯುವಿಗಿತ್ತಿಹುದು ಟೊಳ್ಳು
ಅಮರತ್ವದ ಠಾವು !

೯

ಇದ್ದರೂ ಸತ್ತಂತೆ ಇರುವವರೆ ಬಹುಜನರು,
ಇದ್ದವರಿಗೆಲ್ಲ ಸಾವಾಗಿ ಇರುವರು ಕೆಲರು,
ಪೊದ್ದುತನದಲಿ ಸಾವಿಗಂಜಿ, ಬದುಕನೆ ಸಾವ
ಮಾಡಿಕೊಂಡವರು ಹಲರು.

ಇದ್ದಾಗ ನಿನ್ನಂತೆ ಇದ್ದವರು ಯಾರಿಹರು ?
ಬಿದ್ದವರ ಬಾಳಲ್ಲಿ ಜೀವಕಳೆಯನ್ನೂದಿ
ತಿದ್ದಿ ನಡೆಸಿವರಾರು ನಿನ್ನವೊಲು ಬಾಪೂಜಿ,
ಸಾವಿರದ ಶೂರರಾರು ?

★ ★ ★

— ನೂರಾಮೂರು —

( ಶೋಕಗೀತ )

೧

ಶಕ್ತಿದೈವತದ ಬಲಗೈಯ ಕರವಾಲವೇ,
ಯುಕ್ತಿಯಲಿ ಹಗೆಯ ಬಂಧಿಸುವಿಂದ್ರಜಾಲವೇ,
ದಿಕ್ಕು-ದಿಕ್ಕುಗಳ ರಕ್ಷಿಸಿದೇಕ ದಿಗ್ಗಜವೆ,
ಭರತರಾಷ್ಟ್ರದ ಧೈರ್ಯಪುರುಷ ಕೀರ್ತಿಧ್ವಜವೆ!
ಭಾಯಿ, ವಲ್ಲಭಭಾಯಿ, ಭಾರತಿಯ ಕಣ್ಮಣಿ—
ನಿನ್ನನೂ ಕಬಳಿಸಿದಳೇ ಮೃತ್ಯುರಾಣಿ?

೨

ಓ, ಮೃತ್ಯುದೇವತೆಯೆ ನಿರ್ದಯೇ, ನಿನ್ನನೂ
ದೇವಿಯರ ಶ್ರೇಣಿಯಲಿ ಸೇರಿಸಿದನಾವನು?
ನಿನಗೆ ಕಣ್ಣಿವೆಯೇನು? ನಿನಗೆ ಕರುಳಿದೆಯೇನು?
ಕನಸೊಳಾದರು ಲೋಕಹಿತವ ಬಗೆದಿಹೆಯೇನು?
ಲೋಕಹಿತಕಿರದವಳು ನೀನೆಂತು ದೇವತೆಯು?
ಲೌಕಿಕರ ದುಃಖದಲಿ ನೂಕುವುದೆ ಸತ್ಕೃತಿಯು?

೩

ಓ! ಮೃತ್ಯುರಾಣೀಽಽ! ಬಾ, ನೋಡು ಬಾರಿಲ್ಲಿ,
ನೀನಿಂದು ಗೆಯ್ದ ತಾಂಡವದ ಪರಿಣಾಮವನು!
ಎಂಥ ಜೀವದ ಹೂವ ತುಳಿ-ತುಳಿದು ಬಳಲಿಸಿದೆ?
ಆ ಹೂವ ಬಯಸುವರ ಎದೆಯೆದೆಯನಳಲಿಸಿದೆ!
ನಾಡಿನಲಿ ಹರಿಯುತಿದೆ ಕಂಬನಿಯ ಹೊನಲು
ಚಳಿಗಾಳಿಯೂ ಚೆಲ್ಲುತಿದೆ ಬಿಸಿಯ ಸುಯಿಲು!

೪

ಉಕ್ಕಿನೆದೆಯವನೆಂದು ಹೆಸರಾಂತ ಧೀರಾ!
ಉಕ್ಕಿನೆದೆಯನ್ನು ಕಾಯಲಿಕೆಂದು ಮೈಯನೂ
ಉಕ್ಕಿನದೆ ಪಡೆದುಕೊಂಡಿರ್ದೆಯೆಂದಿರ್ದೆವೈ!
ನಿನ್ನ ಉಕ್ಕಿನ ಜೀವ ಭಾರತದ ರಕ್ಷಣೆಗೆ
ಬನ್ನವಿಲ್ಲದ ಕವಚವೆಂದು ಬಗೆದಿರ್ದೆವೈ!
  ಬಂಧು, ವಲ್ಲಭರಾಜ, ನಿನ್ನ ಮರಣವಿದು—
  ನಮ್ಮ ನಂಬುಗೆಗೆಂಥ ಹಾರೆಯಿಕ್ಕಿದುದು!

೫

ನಿರ್ಜೀವದಲ್ಲಿ ಜೀವವನೂದಿದವ ನೀನು,
ಬೆಂಡುಗಳಲೂ ಬಲದ ಸಾರವೆರೆದವನು;
ಬಯಲಲ್ಲಿ ಧೈರ್ಯಮೇರುವ ಮೆರಸಿದವ ನೀನು
ಭಯವನ್ನು ಶೌರ್ಯದಲಿ ಮಾರ್ಪಡಿಸಿದವನು!
  ಓ, ಅಣ್ಣಾ ವಲ್ಲಭಾ, ನೀನು ಸಾಹಸಮಲ್ಲ,
  ನಿನಗೆ ಸಾವೇ? ಸುಳ್ಳು ಸುಳ್ಳು! ಹುಸಿಮಾತೆಲ್ಲ!

೬

ಅಯ್ಯೊ, ಏನಿದು ಭ್ರಮೆಯು! ದುಃಖದುನ್ಮಾದ!
ಭಾರತದಿ ತುಂಬಿರುವ ಈ ಆರ್ತನಾದ....
ಕಿವಿಗೆ ಕೇಳುತಲಿಹುದು, ಮನಕೆ ಕಾಣುತಲಿಹುದು,
ಸುಳ್ಳು ಎಂತಾಗುವುದು ವಲ್ಲಭನ ಮರಣವದು!
  ನಿಜವೆ, ಅಂತಾದೊಡಾ ಧೀರನಾ ಸಾವು?
  ಅಯ್ಯೊ, ನಾಡಿನ ಜನಕೆ ಮಾಯದಾ ನೋವು!

೭

ಅಕ್ಕಟಾ !

ಭಾರತದ ಕಾಪಿಂಗೆ ಕೋಟೆಯಿನ್ನಾರು ?
ಹಗೆಯು ಗುಂಡಿಗೆಯೊಡೆವ ಗುಡುಗು ಇನ್ನಾರು ?
ಕಂಗೆಟ್ಟ ಜನಕುಲಕೆ ಕಣ್ಣು ಇನ್ನಾರು ?
ಸಿಡಿಲುನುಡಿಯಿಂದ ಭಯುವನು ಜಡಿವರಾರು ?
ಯಾರಿಹರು ? ಯಾರಿಹರು ? ಯಾರು, ಇನ್ನಾರು ?
ಈ ಕೇಳ್ಕೆಗುತ್ತರವ ಕೊಡುವರಾರಿಹರು ?

೮

ಶಕ್ತಿದೈವತದ ಬಲಗೈಯ ಕರವಾಲವೆ ?
ಯುಕ್ತಿಯಲಿ ಹಗೆಯ ಬಂಧಿಸುವಿಂದ್ರಜಾಲವೆ ?
ದಿಕ್ಕು-ದಿಕ್ಕುಗಳ ರಕ್ಷಿಸಿದೇಕ ದಿಗ್ಗಜವೆ !
ಭರತರಾಷ್ಟ್ರದ ಧೈರ್ಯಪುರುಷ ಕೀರ್ತಿಧ್ವಜವೆ ?
ಭಾಯಿ, ವಲ್ಲಭಭಾಯಿ, ಭಾರತದ ಕಣ್ಮಣಿ,
ನಿನ್ನನೂ ಕಬಳಿಸಿದಳೇ ಮೃತ್ಯುರಾಣಿ ?

★ ★ ★

## ೪೮ * * * ಸಂಕ್ರಾಂತಿ

– ಪಲ್ಲವಿ –

ಕಳೆದು ಭ್ರಾಂತಿ ತುಳಿದಶಾಂತಿ
ಹೊಳೆಯಿತು ಸಂಕ್ರಾಂತಿ !
ಇಳೆಯೊಳಿಡಿದ ಕುಳಿರನಳಿದು
ಬಲಿಯಲು ಹೊಸಕಾಂತಿ !

ಮೂಡುಗಾಳಿ ಬೀಸಿ ಬೀಸಿ,
ನಾಡ ಬೆಳೆಯ ಕಸುಕ ಸೋಸಿ,
ಮಾಡಿ ವಿವಿಧಧಾನ್ಯರಾಶಿ,
ಹಸಿವೆಗೀಯೆ ಶಾಂತಿ....
ಕಳೆದು ಭ್ರಾಂತಿ ತುಳಿದಶಾಂತಿ
ಹೊಳೆಯಿತು ಸಂಕ್ರಾಂತಿ ! ೧

ಕುಡಿಯೊಡೆದಿದೆ ಬರಲುಮಾವು,
ಗಿಡಗಿಡ ಕಾಡೆಲ್ಲ ಹೂವು,
ಹುಡುಕುತಲಿದೆ ಜೇನ್ಗೆ ಠಾವು
ಜೇನ್ನೊಣಗಳ ಹಂತಿ !
ಕಳೆದು ಭ್ರಾಂತಿ ತುಳಿದಶಾಂತಿ
ಹೊಳೆಯಿತು ಸಂಕ್ರಾಂತಿ ! ೨

ಬಿಸುಪ ಕಳೆದುಕೊಂಡ ರವಿ,
ಎಸೆವನಿದೋ ತೀವಿ ಛವಿ,
ಹೊಸಹಬ್ಬವಿದೆನಿತು ಸವಿ !
ಬುವಿಯು ಭಾಗ್ಯವಂತಿ....
ಕಳೆದು ಭ್ರಾಂತಿ ತುಳಿದಶಾಂತಿ
ಹೊಳೆಯಿತು ಸಂಕ್ರಾಂತಿ ! ೩

೪

ಒಲವಮ್ಮನ ಜಾತ್ರೆಗೆಂದು
ಚೆಲುವಿನ ಗುಡಿಯೆತ್ತಿ ನಿಂದು
ನಲಿಯುತಲಿದೆ ಹೆಣ್ಣು-ಗಂಡು,
ಇಲ್ಲದೆ ವಿಶ್ರಾಂತಿ....
ಕಳೆದು ಭ್ರಾಂತಿ, ತುಳಿದಶಾಂತಿ
ಹೊಳೆಯಿತು ಸಂಕ್ರಾಂತಿ !

೫

ಎಳ್ಳು-ಬೆಲ್ಲ ಚಿಗುಳಿ ಹದ
ಒಲ್ವಾಯಿಗೆ ಶ್ರೀಪ್ರಸಾದ,
ಸಲ್ಲಿಸಿ ಸೆಳೆಯುವರು ಮುದ
ಏನಿದೇನು ಶಾಂತಿ....
ಕಳೆದು ಭ್ರಾಂತಿ ತುಳಿದಶಾಂತಿ
ಹೊಳೆಯಿತು ಸಂಕ್ರಾಂತಿ !

೬

ಎಳ್ಳ ನೇಹ ಎದೆಯೊಳಾಯ್ತು,
ಬೆಲ್ಲದ ಸಿಹಿ ಸೊಲ್ಲೊಳಾಯ್ತು,
ಎಲ್ಲಿಯದು ಸಮರಸದ ಗುರುತು
ಶಾಂತಿ ಶಾಂತಿ ಶಾಂತಿ !
ಕಳೆದು ಭ್ರಾಂತಿ ತುಳಿದಶಾಂತಿ
ಹೊಳೆಯಿತು ಸಂಕ್ರಾಂತಿ !

* * *

– ಪಲ್ಲವಿ –

ಬಾ, ತರಣಿಯು ತುಂಬಿದ ಹೊಂಬೆಳಕೇ,
ಈ ತಮವನು ತೊಳೆಯಲು ನೆಲಕೆ !

೧

'ಕಾರಿರುಳನು ಬಿಡಿ, ಬೆಳಕಿಗೆ ಕಾಲಿಡಿ !
ಸಾರುತಿದೆಯಿಂತು ದೈವದ ತಿಳಿನುಡಿ ;
ಆರಯ್ಯುವುದಿಳೆ ನಿನ್ನ ಬರವಿನಡಿ,
ತೂರುತ ಕಿರಣವ ಕೆಲಕೆಲಕೆ....
ಬಾ, ತರಣಿಯು ತುಂಬಿದ ಹೊಂಬೆಳಕೆ !

೨

ಹೊರಗೊಳಗು ಕಱ್ತಲೆಯೆ ತುಂಬಿಹುದೋ !
ಕಿರುಸೊಡರ ಮಿಣುಕುಮನೆಯೆಂತಹದೋ !
ಉರಿ-ಪಂಜುಗಳನೆಂತು ನಂಬುವುದೋ !
ನೀ ಬೇಕೆಂಬುದೆ ಎಲ್ಲರ ಬಯಕೆ....
ಬಾ, ತರಣಿಯ ತುಂಬಿದ ಹೊಂಬೆಳಕೇ !

೩

ಹೊರಟೆಡೆ ಎಲ್ಲುಳಿಯಿತೊ, ಕಾಣದಿದೆ !
ತೆರಳ್ವೆಡೆಯೆಲ್ಲಿದೆಯೋ ಮರೆಯಲಿದೆ !
ನೆರೆ-ಹೊರೆಗಳ ನೆಲೆಯೂ ತಿಳಿಯದಿದೆ !
ತಿರುಗುತಲಿಹೆ ಏನನೊ ಹುಡುಕಲಿಕೆ....
ಬಾ, ತರಣಿಯು ತುಂಬಿದ ಹೊಂಬೆಳಕೇ !

★ ★ ★

– ಪಲ್ಲವಿ –

ಬೇಗನೆ ಬಾ, ಬರಲಿರುವಾ
ಸವಿದಿನ ನೀನು....
ಸಾಗಿಸುವೆನು ಇಂದಿನ ಈ
ಕಹಿಬವಣೆಯನು!

೧

ನಿನ್ನೆಯು ದಿನ ಹೋಯ್ತು, ಸಾಗಿ
ಬೇಕಿಹುದನು ಕೊಡಲೆ ಇಲ್ಲ;
ಇಂದಿನ ದಿನ ನಡೆದಿರುವುದು,
ಹೇಗೊ ಕಾಲ ಸವೆಯುತಿಹುದು,
ಬೇಕಾದುದು ಬರಲೆ ಇಲ್ಲ!
ಬರಡೆ ಬಯಕೆಯೆಲ್ಲ....
ಗುರಿಯೆ ದೊರೆಯಲಿಲ್ಲ!

೨

ಆದರೇನು ಅಲ್ಲ ವ್ಯರ್ಥ,-
ನಿನ್ನೆ-ಇಂದಿಗಿಹುದು ಅರ್ಥ!
ಹೊಸ ಹೊಸ ನೋಟಗಳ ತೋರಿ
ಹೊಸ ಅನುಭವ ಬೀರಿ ಬೀರಿ,
ಕಲಿಸಿರುವುವು ಒಂದನು;
ಬರಿಯೆ ಬಯಕೆಗಿಂತ ಗೆಯ್ಮೆ
ಹಿರಿಯದೆಂಬ ಹೊಂದನು.

೩

ಕಿವಿಯು ಕೇಳಬೇಕು ಶುಭವ,
ಕಣ್ಣು ನೋಡಬೇಕು ನಿಜವ,
ನಾಲಗೆ ನುಡಿದಾಡಬೇಕು
ಕೆಳೆತುಂಬಿದ ದಿಟವ!
ಕೈ ಒಳಿತಿಗೆ ಗೈಯಬೇಕು,
ಮನ ಶುಭವನೆ ನೆನೆಯಬೇಕು,
ಕಾಲು ನಡೆಯುತಿರಲೆಬೇಕು
ಅಮೃತದತ್ತ ತೆರಳಬೇಕು—
ಎಂಬನುಭವವ....
ಕಳೆದ ನಿನ್ನೆ ಕಳೆವ ಇಂದು
ಕೊಟ್ಟವೆ ತಿಳಿವ!
ನೀಡಿವೆ ವಿಭವ!

೪

ಬರಲಿಹ ದಿನ ಬರಿಯದಲ್ಲ;
ನನ್ನಯ ಅನುಭವವಿದೆಲ್ಲ—
ನನ್ನ ಗೈಮೆಯೊಂದೊಂದನು
ಹಣ್ಣಿಗಣಿಯು ಮಾಡದೇನು?
ಅಂದು ನನ್ನ ಮಿಡಿವ ಬಯಕೆ
ಬಯಲಾಗುವ ಭೀತಿಯೇಕೆ?
ಬರಲಿಹ ದಿನ ನಾಳೆ....
ನಾನು ಗೈಮೆಗೇಳೆ....
ಮನೆಯ ತುಂಬ ಕಾಳೇ!

ಭುವಿಯ ಚೇತನಾಗ್ನಿಯಲ್ಲಿ
ಸೂರ್ಯ ಬಲಿಯ ನೀಡುವ;
ಅಮೃತಗರ್ಭನಾದ ಸೋಮ
ಸೋಮರಸವನೂಡುವ.

ಅಗಣಿತ ಗ್ರಹ-ತಾರಕಾಳಿ
ಮಧುಹೋಮವ ನಡೆಸಿವೆ;
ಮೋಡ-ಗುಡುಗು, ಮಿಂಚು-ಸಿಡಿಲು
ಉದಧಿಗರ್ಘ್ಯ ಕೊಡುತಿವೆ! ೪

ಸಾಗರ ಹೋತಾರನಾಗಿ
ಸೂರ್ಯಗೆ ಬಲಿ ನೀಡುವ;
ಸೂರ್ಯನು ದಾತಾರನಾಗಿ
ಮೇಘಕೆ ಹವಿ ಹಾಕುವ.

ಮೇಘ ಯಾಗಕರ್ತೃವಾಗಿ
ಮಳೆಗೆ ನೀರ ಬೇಳ್ವುದು.
ಮಳೆಯು ಯಾಜಮಾನ್ಯ ವಹಿಸಿ
ಇಳೆಗೆ ಬಾಳನೆರೆವುದು. ೫

ಪಾತಾಳದ ಶಕ್ತಿಮೂರ್ತಿ
ಭೂತಳದೀ ಭೂತಗಣಕೆ
ಸತ್ತ್ವಾಹುತಿ ಕೊಡುತಿದೆ;
ಸತ್ತ್ವಹವನ ಮಹಾಫಲವೆ
ಸಸ್ಯಗಳಲಿ ರೂಪುಗೊಂಡು,
ಜೀವಕೆ ಕೂಳಿಡುತಿದೆ.

ಜೀವ ಕೊಳನುಣುತಿವೆ ;
ಜೀವನ ಬಲ ಕೊಳುತಿವೆ ;
ಊಟ ಆಟ ಅರಿತಿವೆ—
ಅದರೊಳೆ ಮೈಮರೆತಿವೆ. ೬

‘ ಪ್ರತಿಜೀವವು ಪಡೆಯಬೇಕು
ಯಾಜಮಾನ್ಯ ದೀಕ್ಷೆ! ’
ಎಂದಿರುವುದು ಯಜ್ಞಪ್ರಿಯ-
ಸೃಷ್ಟಿಯ ಸದಪೇಕ್ಷೆ!
ಒಂದು ಜೀವಿಗೊಂದು ಜೀವ
ವಹ್ನಿಯು ಯಜಮಾನ-
ಆಗಬೇಕು; ಆದರೆಯೇ
ಶಾಂತಿ-ಸಮಾಧಾನ! ೭

ಯಜ್ಞಸೂತ್ರದಲಿಯೆ ಕೋದು
ಲೋಕ-ಲೋಕ ನಿಂತಿವೆ ;
ಎಂದೆಂದಿಗು ಚ್ಯುತಿಯು ಇರದ
ಸಮಗತಿಗಳನಾಂತಿವೆ
ಅದೋ ಅಲ್ಲಿ, ಇದೋ ಇಲ್ಲಿ,
ಎಲ್ಲೆಲ್ಲಿಯು ಯಜ್ಞ !
ಯಜ್ಞವ್ಯಾಪ್ತಿಯೆಂತಹದಿದು !
ಅರಿತವನೇ ಪ್ರಾಜ್ಞ ! ೮



ಹೊಸತೆ ಇರಲಿ, ಹಳತೆ ಇರಲಿ,
ಒಳಿತು ಯಾವುದೊ, ಬಾಳ್ಗೆ ಬರಲಿ!
ಮೂಡಲೇನು, ಪಡುವಲೇನು ?
ಬೆಳಕ ಬದುಕಿಗೆ ಹೂಡಿ ತರಲಿ!
ಹಳ್ಳ-ತಿಟ್ಟು ಸರಿಯಲಿ—
ಒಳ್ಳೆದಾರಿ ಸಮೆಯಲಿ! ೧

ಸೃಷ್ಟಿದೇವಿ ಕೊಟ್ಟ ಪಯಿರ
ಒಟ್ಟುಗೂಡುತಲೆಲ್ಲರೊಕ್ಕಲಿ!
ಕೊಟ್ಟುಕೊಂಡು ಎಲ್ಲರುಂಡು
ಹೊಟ್ಟೆಯುರಿಯನು ತಿಕ್ಕಿ ಮುಕ್ಕಲಿ!
ದುಡಿದು ಒಡಲು ಸೊಕ್ಕಲಿ—
ಆಲಸಿಕೆಯುದು ಬಿಕ್ಕಲಿ! ೨

ಇದ್ದ ಜನರ ಕೊಡುವ ಕೈಯಿ
ಇಲ್ಲದವರನು ಬಳಿಗೆ ಕರೆಯಲಿ!
ಬಿದ್ದ ಜನರು ಮೇಲಕೆದ್ದು
ಮುಂದೆ ಇದ್ದವರನ್ನು ಬೆರೆಯಲಿ!
ಶ್ರದ್ಧೆ ಸ್ನೇಹ ಮೆರೆಯಲಿ—
ಹಿಗ್ಗು ನೆಲವ ಹೊರೆಯಲಿ! ೩

ದನಿಯನೆತ್ತಿ ಕೊಳಲು ವೀಣೆ
ಇನಿದು ಗಾನವ ಬಿಡದೆ ಮಾಡಲಿ!
ಜನರು ಜಗಳ-ವಾದವುಳಿದು
ಸರಸ ಕವನವ ಸತತ ಹಾಡಲಿ!
ಧರೆಯೆ ಸ್ವರ್ಗವಾಗಲಿ—
ನರರೆ ಅಮರರಾಗಲಿ! ೪

# ಮೊದಲ ಸಾಲುಗಳ ಸೂಚಿ